

ಸ್ಕೌಟ್ ಶತಮಾನೋತ್ಸವ - 2007 Price Rs. 3.00/- per copy only




# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide

## News Magazine

Vol - 7 MARCH - 2008 NO -




Sri Amar Kumar Pandey, Commissioner for Youth Services & Sports, Govt. of Karnataka, inaugurated the orld Scout Centenary Monument" at Shanthigruha, Palace Road on 22 February 2008 on the occasion of World ut Day & Thinking Day. Sri T. Prabhakar, State Treasurer, Sri Kondajji B. Shanmukhappa, SCC and t. Geetha Nataraj, Joint State Secretary (Guides) are seen.



Smt. Indrakshi Devi Rajachandra, daughter of Former Highness Sri Jaya Chamrajendra Wadiyar, lighted the Candle during inauguration of World Scout Centenary Monument on 22 February 2008, Sri Amar Kumar Pandey, CYSS, State Treasurer, State Chief Commissioner & Joint State Secretary(Guides) are also seen.



ದಿನಾಂಕ 9-3-2008 ರಂದು ಬೆಂಗಳೂರಿನಲ್ಲಿ ಜರುಗಿದ ರಾಜ್ಯಮಟ್ಟದ ಆಜೀವ ಸದಸ್ಯರ ಸಮಾವೇಶವನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಪ್ರಕಟಣೆಗಳ ಸಮಿತಿ ಅಧ್ಯಕ್ಷರು ಹಾಗೂ ರಾಜ್ಯದ ಹಿರಿಯ ಸಾಹಿತಿಗಳಾದ ಶ್ರೀ ಗೊ.ರು. ಚನ್ನಬಸಪ್ಪ ಜ್ಯೋತಿ ಬೆಳಗಿ ಉದ್ಘಾಟಿಸಿದರು. ರಾಜ್ಯ ಸಂಸ್ಥೆ ಉಪಾಧ್ಯಕ್ಷಣಿ ಶ್ರೀಮತಿ ಎಂ.ಜಿ. ಬೋಪಯ್ಯ, ಶ್ರೀ ಎಂ. ಎ. ಖಾಲಿದ್, ಶ್ರೀ ಎ. ಶಿವಮಹದೇವನ್ ಹಾಗೂ ಶ್ರೀ ಪ್ರಭುದೇವ ಜೆ. ಚಿಗಟೇರಿ ಚಿತ್ರದಲ್ಲಿದ್ದಾರೆ.



Chief Guest Sri Amar Kumar Pandey
Guest of Honour Smt. Indrakshidevi RajaChandra
Sri M.S. Nataraj, ASC(S) & Co-Ordinator, Centenar
Monument Committee Smt. Saroja V. [illegible]idu
Headquarters Commissioner(G), Smt. Geetha Natara
JSS(G), Sri Kondajji B. Shanmukhappa, State Chie
Commissioner and Miss. Ravi Wesley, Headquarters
Commissioner(G) are also seen.




Chief Guest Sri Amar Kumar Pandey,CYSS is
ddressing on the Occasion of World Scout Day
hinking Day. Smt S. Lalithamma, Joint Director of Youth
ervices, Sri T.S. Lucas, Chairman, Centenary
elebrations Committee, Lt. Col. V.C. Haridev Katkar,
rof. M. Suryanarayanappa, Smt. Indrakshidevi
ajachandra, Sri T. Prabhakar, State Treasurer,
r P.V. Ratna Urs, Asst. State Commissioner, Mysore
ivision are seen.



Chief Guest & CYSS Sri Amar Kumar Pandey h
interaction with Cubs / Bulbuls, Scouts & Guides a
other Volunteers of the Movement on the Occasion
World Scout Day & Thinking Day. Guest of Hon
Smt. Indrakshidevi Rajachandra, Joint Direc
Smt. S. Lalithamma and other State Headquart
Officials are seen.



Sri M.S. Nataraj, Asst. State Commissioner(Scouts) & Co-ordinator of Centenary Monument Committee was Honoured by the Chief Guest Sri Amar Kumar Pandey. Sri T.S. Lucas, Sri Kondajji B. Shanmukhappa Smt. Janaki Venugopal, Sri Omeshwaraiah & Lt. Col. V.C. Haridev Katkar are seen.




Vol - 7 March - 2008 No. 03



## ಪರಿವಿಡಿ

# ರಾಜ್ಯ ಮುಖ್ಯ ಆಯುಕ್ತರ ನುಡಿ........................................

ಮಾನ್ಯರೆ,

ಆಗಸ್ಟ್ 1, 2007 ರಂದು ಬೆಂಗಳೂರಿನ "ಶಿಕ್ಷಕರ ಸದನ"ದಲ್ಲಿ ಆರಂಭಗೊಂಡ ವಿಶ್ವ ಸ್ಕೌಟ್ ಶತಮಾನೋತ್ಸವ ಸಮಾರಂಭದಿಂದ ದಿನಾಂರ 09-03-2008 ರಂದು ಬಸವ ಸಮಿತಿಯ ಸಭಾ ಭವನದಲ್ಲಿ ಜರುಗಿದ ರಾಜ್ಯಮಟ್ಟದ ಆಜೀವ ಸದಸ್ಯರ ಸಮಾವೇಶದವರವಿಗೆ ರಾಜ್ಯ ಸಂಸ್ಥೆ ಹಮ್ಮಿಕೊಂಡಿದ್ದ 9 ರಾಜ್ಯ ಮಟ್ಟದ ಕಾರ್ಯಕ್ರಮಗಳಲ್ಲಿ 7 ಮುಗಿದಿದ್ದು - ರಾಜ್ಯ ತರಬೇತಿ ನಾಯಕರ ಹಾಗು ರೋವರ್‌ಗಳ ಸಮಾವೇಶ ಏಪ್ರಿಲ್‌ನಲ್ಲಿ ನಡೆಯಲು ಸಿದ್ಧತೆ ಆಗಿದೆ.

ದಿನಾಂಕ ಮಾರ್ಚ್ 9 ರಂದು ಜರುಗಿದ ರಾಜ್ಯಮಟ್ಟದ ಸಮಾವೇಶವನ್ನು ಜ್ಯೋತಿಬೆಳಗಿ ಉದ್ಘಾಟಿಸಿದ ಸಂಸ್ಥೆಯ ಪ್ರಕಟಣ ಸಮಿತಿಯ ಅಧ್ಯಕ್ಷರೂ ಹಾಗು ರಾಜ್ಯದ ಹಿರಿಯ - ಸಹೃದಯ ಸಾಹಿತಿಗಳು ಸಮಾಜಮುಖಿ ಕೆಲಸಗಳಿಗೆ ಕಳೆದ ಐದು ದಶಕಗಳಿಗೂ ಹೆಚ್ಚು ಕಾಲ ತೊಡಗಿಸಿಕೊಂಡಿರುವ ಶ್ರೀ ಗೊ.ರು. ಚನ್ನಬಸಪ್ಪನವರು ಹೃದಯಕ್ಕೆ ಮುಟ್ಟುವಂತೆ ಮಾಡಿದ ಭಾಷಣವನ್ನು ಸಂಚಿಕೆಯಲ್ಲಿ ಪ್ರಕಟಿಸಿದೆ.

ದಳಗಳ ಹಂತದಿಂದ ಪ್ರಾರಂಭಗೊಂಡ ವಿಶ್ವ ಸ್ಕೌಟ್ ಶತಮಾನೋತ್ಸವ ಕಾರ್ಯಕ್ರಮಗಳು, ಸ್ಥಳೀಯ, ಜಿಲ್ಲೆ, ವಿಭಾಗ, ಶಾಲೆಗಳ ಹಂತದಲ್ಲಿ ಅತ್ಯಂತ ಯಶಸ್ವಿಯಾಗಿ ಜರುಗಿದ ಬಗ್ಗೆ ಕಳೆದ 8 ತಿಂಗಳಿಂದಲೂ "ಕರ್ನಾಟಕ ಸ್ಕೌಟ್-ಗೈಡ್ ವಾರ್ತಾ ಪತ್ರಿಕೆಯಲ್ಲಿ" ಪ್ರತಿ ತಿಂಗಳು ಸಚಿತ್ರ ವರದಿ ಪ್ರಕಟಿಸಲಾಗಿದ್ದು, ಲಕ್ಷಾಂತರ ಸ್ಕೌಟ್-ಗೈಡ್‌ಗಳು, ರೋವರ್-ರೇಂಜರ್‌ಗಳು, ಸ್ಕೌಟ್ ಮಾಸ್ಟರ್, ಕಬ್ ಮಾಸ್ಟರ್, ಪ್ಲಾಕ್ ಲೀಡರ್-ಗೈಡ್ ಕ್ಯಾಪ್ಟನ್‌ಗಳು, ವಿವಿಧ ಹಂತದ ಚಳವಳಿಯಲ್ಲಿ ಹಲವು ದಶಕಗಳಿಂದ ತೊಡಗಿಸಿಕೊಂಡಿರುವ ಸಂಸ್ಥೆಯ ಕಾರ್ಯಕರ್ತರುಗಳ ಪದಾಧಿಕಾರಿಗಳು, ಪೋಷಕರು, ಅಭಿಮಾನಿಗಳು, ಸಾರ್ವಜನಿಕರು ಹಾಗೂ ಹಿತೈಷಿಗಳು ಓದಿ, ತಮ್ಮ ಸಂತಸ, ಅಭಿಮಾನಿಗಳನ್ನು ಬಹಳಷ್ಟು ವಲಯಗಳಲ್ಲಿ ಹಂಚಿಕೊಂಡಿರುವುದು ನನ್ನ ಗಮನಕ್ಕೆ, ಸಹೋದ್ಯೋಗಿಗಳ ಮುಖೇನ, ಜಿಲ್ಲೆಗಳ ಹಾಗೂ ಸ್ಥಳೀಯ ಸಂಸ್ಥೆಗಳ ಪ್ರವಾಸ ಸಂದರ್ಭದಲ್ಲಿ ಬಂದಿರುತ್ತದೆ. ಇದು ನಿಜಕ್ಕೂ ನಾವೆಲ್ಲ ಅಭಿಮಾನ ಪಡುವ ವಿಷಯ.

ಚಳವಳಿಯ ಹೆಜ್ಜೆ ಗುರುತುಗಳನ್ನು ಹೆಚ್ಚಿಸುವ ನಮ್ಮಗಳ ಪ್ರಯತ್ನದಲ್ಲಿ ಇಷ್ಟೊಂದು ಬೃಹದಾಕಾರವಾಗಿ ಚಳವಳಿಯ ಧ್ಯೇಯ - ಚಿಂತನೆ ಹಾಗೂ ಅವಶ್ಯಕತೆಯನ್ನು ಸಮಾಜಕ್ಕೆ ಮುಟ್ಟಿಸುವಲ್ಲಿ ಸಹಕರಿಸಿದ ಹಾಗೂ ಅರ್ಪಣಾ ಮನೋಭಾವದಿಂದ ಕರ್ತವ್ಯ ನಿರ್ವಹಿಸಿದ ದಳಗಳು, ಸ್ಥಳೀಯ, ಸಂಸ್ಥೆಗಳು, ಜಿಲ್ಲೆಗಳು ಹಾಗು ರಾಜ್ಯ ಸಂಸ್ಥೆ ಅಲ್ಲದೆ ಪ್ರತ್ಯಕ್ಷವಾಗಿ ಹಾಗು ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಮಾರ್ಚ್ 20, 2008ರ "ತರಂಗ" ವಾರಪತ್ರಿಕೆ ತನ್ನ ಮುಖಪುಟದಲ್ಲಿ "ಶತಾಯುಷಿ ಸ್ಕೌಟ್" ವ್ಯಕ್ತಿತ್ವ ವಿಕಸನ, ಸ್ವಾವಲಂಬನೆ, ಶಿಸ್ತು, ಸಮಾಜ ಸೇವೆಗಳ "ಗರಡಿಮನೆ" ಎಂಬ ಶೀರ್ಷಿಕೆಯೊಂದಿಗೆ ಹಾಗೂ ಒಬ್ಬ ಸ್ಕೌಟ್ ಗೈಡ್‌ನ "ಸೆಲ್ಯೂಟ್" ನೊಂದಿಗೆ ಸಂಚಿಕೆಯ ಒಳ 11 ಪುಟಗಳಲ್ಲಿ ಚಳವಳಿಯ ಇತಿಹಾಸ, ಸ್ಥಾಪಕ ಲಾರ್ಡ್ ರಾಬರ್ಟ್ ಬೇಡನ್ ಪೊವೆಲ್‌ರ ವೈಶಿಷ್ಠಮಯ, ಉದಾತ್ತ ಹಾಗೂ ಚೇತೋಹಾರಿ ಜೀವನ ದರ್ಶನ, ಚಳವಳಿಯ ಪ್ರಪಂಚ ಪರ್ಯಟನೆ, ಯುವಕ, ಯುವತಿಯರು ಚಳವಳಿಯ ವಿವಿಧ ಹಂತಗಳನ್ನು ತಲುಪಲು ಪಡಬೇಕಾದ ಪರಿಶ್ರಮ ಹಾಗು ಲಭ್ಯವಿರುವ ಪದಕಗಳ ವಿವರಗಳು, ಅಲ್ಲದೆ ಸಮಾಜ, ಅಧ್ಯಾಪಕ ವರ್ಗ, ಪೋಷಕರು - ಸರ್ಕಾರ ಚಳವಳಿಗೆ ಇನ್ನೂ ನೀಡಬೇಕಿರುವ ಹೆಚ್ಚಿನ ಆದ್ಯತೆ ಪ್ರೋತ್ಸಾಹಗಳ ಬಗ್ಗೆ ಅತ್ಯಂತ ವಿಮರ್ಶಾತ್ಮಕ - ಪ್ರೋತ್ಸಾಹದಾಯಕ ಸಚಿತ್ರ ಲೇಖನ ಪ್ರಕಟಿಸಿ, ಕರ್ನಾಟಕ, ಭಾರತ ಹಾಗೂ ಹೊರ ರಾಷ್ಟ್ರಗಳಲ್ಲಿಯೂ ಚಳವಳಿಯ ಬಗ್ಗೆ ಸಮಾಜದ ಎಲ್ಲಾ ಸ್ಥರಗಳ ಅರಿವು ಮೂಡಿಸುವಲ್ಲಿ ಹಾಗೂ ಸ್ಕೌಟ್-ಗೈಡ್ ಚಳವಳಿಯ ಅವಶ್ಯಕತೆಯನ್ನು ಸಮಾಜದ ಎಲ್ಲಾ ಸಮುದಾಯಗಳಿಗೆ ಮುಟ್ಟಿಸುವಲ್ಲಿ ವಿಶಿಷ್ಠ ಪ್ರಯತ್ನ ಮಾಡಿರುವ "ತರಂಗ"ದ ವ್ಯವಸ್ಥಾಪಕ ಸಂಪಾದಕರಾದ ಶ್ರೀಮತಿ ಸಂಧ್ಯಾ ಎಸ್. ಪೈ, ಕಾರ್ಯನಿರ್ವಾಹಕ ಸಂಪಾದಕರಾದ ಶ್ರೀಮತಿ ಯು.ಬಿ. ರಾಜ್ಯಲಕ್ಷ್ಮಿ ಹಾಗೂ ಚಳವಳಿಯ ಒಳಹೊರಗನ್ನು ಸಾಕಷ್ಟು ಅಭ್ಯಸಿಸಿ, ಚಿಂತಿಸಿ, ಸುಂದರವಾಗಿ ಹಾಗೂ ಹೃದಯಾಂತರಾಳಕ್ಕೆ ಮುಟ್ಟುವಂತೆ ಲೇಖನ ಬರೆದಿರುವ ಸಂಪಾದಕೀಯ ವಿಭಾಗದ ಶ್ರೀಮತಿ ರೇವತಿ ಹಾಗು ವಿಶ್ವದಲ್ಲಿ ಸ್ಕೌಟ್ ಚಳವಳಿ ಶತಮಾನೋತ್ಸವ ಆಚರಿಸುತ್ತಿರುವ ಈ ಶುಭ ಸಂದರ್ಭದಲ್ಲಿ ವೈಶಿಷ್ಠಪೂರ್ಣವಾದ ಲೇಖನ ಹೊರ ಬರಲು ಸಾಕಷ್ಟು ಶ್ರಮಿಸಿರುವ ಉಡುಪಿ ಜಿಲ್ಲಾ ಸ್ಕೌಟ್ - ಗೈಡ್ ಸಂಸ್ಥೆಯ ನನ್ನ ಎಲ್ಲಾ ಸಹೋದ್ಯೋಗಿಗಳಿಗೆ ರಾಜ್ಯ ಸಂಸ್ಥೆಯ ಪರವಾಗಿ ಹೃತ್ಪೂರ್ವಕ ನಮನಗಳು.

ತಮ್ಮ ವಿಶ್ವಾಸಿ

ಕೊ.ಬ. ಷಣ್ಮುಖಪ್ಪ

ಕೊಂಡಜ್ಜಿ ಬ. ಷಣ್ಮುಖಪ್ಪ

"ತರುಣರಿರಾ ಎದ್ದೇಳಿ..... ಎಚ್ಚರಗೊಳ್ಳಿ..... ಕೇಳಿ ಹಳೆಮತದ ಕೊಳೆಯೆಲ್ಲಾ
ಹೊಸಮತಿಯ ಹೊಳೆಯಲ್ಲಿ ಕೊಚ್ಚಿ ಹೋಗಲಿ..... ಬರಲಿ ವಿಜ್ಞಾನ ಬುದ್ಧಿ"
"ವೇದ ಪ್ರಮಾಣತೆಯ ಮರು ಮರೀಚಿಕೆಯಲ್ಲಿ ನೀರರಸಿ ಕೆಡದಿರಲಿ
ಸ್ವಾತಂತ್ರ್ಯ ಸಿದ್ಧಿ ತರುಣರಿರಾ ಎದ್ದೇಳಿ! ಎಚ್ಚರಗೊಳ್ಳಿ! ಬಾಳಿ!!"

- ರಾಷ್ಟ್ರಕವಿ ಕುವೆಂಪು

## ಸ್ಕೌಟ್ ಕೌಶಲ್ಯ

### ಶಿಬಿರಾಗ್ನಿ ಉದಂತ ಸಂ-2



# ಸ್ಕೌಟುಗಳು ಏನು ಮಾಡುವರು?

*.....ಹಿಂದಿನ ಸಂಚಿಕೆಯಿಂದ*

### ಹೊರಾಂಗಣದ (ಬಯಲಿನ) ಜೀವನ-ಅರಣ್ಯ ಕೌಶಲ್ಯ ದುರ್ಬಲರ ರಕ್ಷಣಾಶ್ರದ್ಧೆ-ಪ್ರಾಣರಕ್ಷಣೆ-ಕಷ್ಟಸಹಿಷ್ಣುತೆ-ದೇಶಪ್ರೇಮ

ನೀವು ಒಳ್ಳೆಯ ಸ್ಕೌಟ್ ಆಗಬೇಕಾದರೆ ಈ ಕೆಳಕಂಡ ವಿಷಯಗಳನ್ನು ತಿಳಿದಿರಬೇಕು.

### ಹೊರಾಂಗಣ ಜೀವನ

ಶಿಬಿರ ವಾಸವು ಸ್ಕೌಟ್ ಜೀವನದ ಆಹ್ಲಾದಕರ ಭಾಗವಾಗಿದೆ. ದೇವರು ನೀಡಿರುವ ವಿಶಾಲವಾದ ಬಯಲು; ಸ್ವಚ್ಛವಾದ ಗಾಳಿ; ಬೆಟ್ಟಗುಡ್ಡಗಳು; ಮರಗಿಡಗಳು; ಮೃಗ-ಪಕ್ಷಿಗಳು; ಸಮುದ್ರ-ನದಿ; ಆಹ್!! ನಿಸರ್ಗ ಜೀವನ!!! ನಿಮ್ಮದೇ ಆದ ಪುಟ್ಟ ಕ್ಯಾನ್‌ವಾಸ್ ಬಟ್ಟೆಯ ಮನೆ; ನೀವೇ ಅಡಿಗೆ ಮಾಡಿಕೊಳ್ಳುವುದು; ಪರಿಶೋಧನಾ ಚಟುವಟಿಕೆ ಇವೆಲ್ಲವೂ ನಿಮಗೆ ಆರೋಗ್ಯವನ್ನೂ, ಆನಂದವನ್ನೂ ನೀಡುತ್ತವೆ. ಇದನ್ನು ನೀವು ನಗರದ ಹೊಗೆ ಮತ್ತು ಇಟ್ಟಿಗೆ ಗೂಡುಗಳ ಮಧ್ಯೆ ಪಡೆಯಲಾರಿರಿ.

ಹೈಕಿಂಗ್ ಸಹ-ಪ್ರತಿದಿನವೂ ಹೊಸ ಸ್ಥಳಗಳನ್ನು ಪರಿಶೋಧಿಸುತ್ತಾ ನಿಸರ್ಗದ ಒಳನುಗ್ಗುವುದು - ಅದೊಂದು ಮಹತ್ವದ ಆಹ್ಲಾದಕರ ಸಾಹಸವೇ ಸರಿ. ಅದು ನಿಮಗೆ ಶಕ್ತಿಯನ್ನು ನೀಡಿ, ಮಳೆ-ಗಾಳಿ, ಬಿಸಿಲು-ಚಳಿ ಇವುಗಳಾವುವನ್ನೂ ಲೆಕ್ಕಿಸದೆ ಮುನ್ನುಗಲು ಬೇಕಾದ ದೇಹದಾರ್ಢ್ಯವನ್ನು ನೀಡುತ್ತದೆ. ಈ ನಿಮ್ಮ ಆರೋಗ್ಯ ಸ್ಥಿತಿಯು, ಎಂತಹುದೇ ಕಷ್ಟ ಬಂದರೂ, ಎದುರಿಸಿ ಗೆಲ್ಲುತ್ತೇನೆಂಬ ಸ್ಥೈರ್ಯವನ್ನು ನಿಮಗೆ ಕೊಡುತ್ತದೆ.

ಶಿಬಿರವಾಸ ಮತ್ತು ಹೈಕಿಂಗ್‌ಗಳ ಸುಖಾನುಭವವನ್ನು ಪಡೆಯಬೇಕಾದರೆ ಅವುಗಳನ್ನು ಸರಿಯಾಗಿ ಮಾಡುವ ರೀತಿಯನ್ನು ತಿಳಿದಿರಬೇಕು. ನಿಮಗೆ ಗುಡಾರ ಹಾಕಲು ಬರಬೇಕು ಅಥವಾ ನಿಮಗೆ ನೀವೇ ಗುಡಿಸಲು ಕಟ್ಟಿಕೊಳ್ಳಲು ಬರಬೇಕು. ಕಟ್ಟಿಗೆಗಳನ್ನು ಜೋಡಿಸಿ ಬೆಂಕಿ ಹಚ್ಚಲು ಬರಬೇಕು. ನಿಮ್ಮ ಆಹಾರವನ್ನು ತಯಾರಿಸಲು ಬರಬೇಕು. ದಿಮ್ಮಿಗಳನ್ನು ಜೊತೆಗೂಡಿಸಿ ಸೇತುವೆ ಅಥವಾ ತೆಪ್ಪವನ್ನು ಕಟ್ಟಲು ಬರಬೇಕು. ಕಂಡರಿಯದ ಹೊಸ ಜಾಗದಲ್ಲಿ ಹಗಲಿನಂತೆ ರಾತ್ರಿ ವೇಳೆಯಲ್ಲಿಯೂ ಸಹ ನಿಮ್ಮ ದಾರಿಯನ್ನು ಕಂಡುಕೊಳ್ಳಲು ಬರಬೇಕು. ಹೀಗೆಯೇ ಇನ್ನೂ ಎಷ್ಟೊ!!

ನಾಗರೀಕತೆಯ ಮುಂದುವರೆದ ಸ್ಥಳಗಳಲ್ಲಿರುವ ಅನೇಕರಿಗೆ ಇವು ಯಾವುವೂ ಬರುವುದಿಲ್ಲ. ಏಕೆಂದರೆ ಸೌಖ್ಯ ಜೀವನ ನಡೆಸಲು ಸುಸಜ್ಜಿತವಾದ ಮನೆ, ಮಲಗಲು ಮೆತ್ತನೆಯ ಹಾಸಿಗೆ ಇರುತ್ತವೆ. ಬೇರೆಯವರು ಅಡಿಗೆ ಮಾಡುತ್ತಾರೆ. ದಾರಿ ತಿಳಿಯದೆ ಹೋದರೆ ಪೋಲೀಸಿನವರನ್ನು ಕೇಳುತ್ತಾರೆ. ಅಂತಹವರು ಸ್ಕೌಟಿಂಗ್ ಅಥವಾ ಪರಿಶೋಧನೆಗೆ (*exploring*) ಹೊರಟರೆ ಅಸಹಾಯಕರಾಗಿ ಅವಸ್ಥೆ ಪಡುತ್ತಾರೆ.

ಖ್ಯಾತ ಕ್ರೀಡಾಪಟುವನ್ನೇ ತೆಗೆದುಕೊಳ್ಳಿ. ಅವನನ್ನು ಶಿಬಿರವಾಸದಲ್ಲಿ ಶಿಕ್ಷಣ ಪಡೆದಿರುವವನ ಜೊತೆ ಮಾಡಿ, ಗುಡ್ಡಗಾಡು ಪ್ರದೇಶದಲ್ಲಿ ಬಿಡಿ. ಯಾರು ಸುಖಕರವಾಗಿ, ತಮ್ಮನ್ನು ತಾವು ನೋಡಿಕೊಳ್ಳಬಲ್ಲರು ಎಂಬುದು ತಿಳಿಯುತ್ತದೆ.

ಚೆನ್ನಾಗಿ ಬ್ಯಾಟ್ ಮಾಡಿ ಸ್ಕೋರ್ ಮಾಡುವ ಕ್ರೀಡಾಪಟುವು, ಶಿಬಿರದಲ್ಲಿ ಅಸಹಾಯಕನಾಗುತ್ತಾನೆ. ಅವನು ಅಲ್ಲಿ ಪ್ರವೇಶ್ ಸ್ಕೌಟ್ ಮಾತ್ರ.

## ಅರಣ್ಯ ಕೌಶಲ್ಯ (Wood Craft)

ಮೃಗ ಪಕ್ಷಿಗಳು ಮತ್ತು ನಿಸರ್ಗದ ಬಗ್ಗೆ ಜ್ಞಾನವನ್ನು ಪಡೆಯುವುದೇ ಅರಣ್ಯ ಕೌಶಲ್ಯ *(Wood Craft)*.

ಅವುಗಳ ಹೆಜ್ಜೆ ಗುರುತು ಹಿಡಿದು ಅವುಗಳು ವಾಸಿಸುವ ಕಡೆಗೆ ನಿಶ್ಯಬ್ದವಾಗಿ ತೆವಳಿಕೊಂಡು ಹೋಗಿ. ಅವುಗಳ ಸಹಜವಾದ ಜೀವನ ಮತ್ತು ಆಚಾರಗಳ ಬಗ್ಗೆ ತಿಳುವಳಿಕೆಯನ್ನು ಪಡೆಯುತ್ತೀರಿ. ಆ ಕಾರಣ ನೀವು ಅವುಗಳ ಸಹಜ ಸ್ಥಿತಿಯನ್ನು ಗಮನಿಸಬಹುದು ಮತ್ತು ಅವುಗಳ ಸ್ವಭಾವವನ್ನು ಅಧ್ಯಯನ ಮಾಡಬಹುದು.

ಪ್ರಾಣಿಗಳನ್ನು ಬೇಟೆಯಾಡುವ ಕ್ರೀಡೆಯು, ಅವುಗಳನ್ನು ಸುಳಿವುಕೊಡದೆ ಬೆನ್ನಟ್ಟುವ ಮರಸಾಗಿ ಬೆನ್ನಟ್ಟುವ ಕಲೆಯಲ್ಲಿದೆಯೇ ಹೊರತು ಅವುಗಳನ್ನು ಕೊಲ್ಲುವುದರಲ್ಲಲ್ಲ. ಆಹಾರಕ್ಕಾಗಲೀ ಅಥವಾ ಅವುಗಳಿಂದ ತೊಂದರೆ ಉಂಟಾದರಾಗಲೀ ಇಲ್ಲದೆ, ಯಾವುದೇ ಪ್ರಾಣಿಯನ್ನು ಸ್ಕೌಟುಗಳು ಉದ್ದೇಶಪೂರ್ವಕವಾಗಿ ಕೊಲ್ಲುವುದಿಲ್ಲ. ನಿರಂತರವಾಗಿ ಪ್ರಾಣಿಗಳನ್ನು ಅವುಗಳ ಸಹಜವಾದ ವಾತಾವರಣದಲ್ಲಿ ಗಮನಿಸುತ್ತಿದ್ದರೆ, ಅವುಗಳ ಬಗ್ಗೆ ಒಂದು ರೀತಿಯ ಒಲವು ಉಂಟಾಗಿ, ಕೊಲ್ಲಲು ಮನಸ್ಸು ಬರುವುದಿಲ್ಲ.

ಅರಣ್ಯ ಕೌಶಲ್ಯವು ಪ್ರಾಣಿಗಳ ಹೆಜ್ಜೆ ಗುರುತುಗಳನ್ನೂ ಇತರ ಚಿಹ್ನೆಗಳನ್ನೂ ಪತ್ತೆ ಮಾಡುವುದರಲ್ಲಿದೆ. ಅಲ್ಲದೆ ಅವುಗಳ ಅರ್ಥವನ್ನು ತಿಳಿದುಕೊಳ್ಳುವುದರಲ್ಲೂ ಇದೆ. ಉದಾ : ಪ್ರಾಣಿಯು ಯಾವ ವೇಗದಲ್ಲಿ ಹೋಗುತ್ತಿತ್ತು? ಧೈರ್ಯವಾಗಿತ್ತೇ? ಭಯಗ್ರಸ್ತವಾಗಿತ್ತೆ? ಮುಂತಾದ ವಿವರಗಳನ್ನು ಅರ್ಥಮಾಡಿಕೊಳ್ಳುವುದರಿಂದ, ಬೇಟೆಗಾರನೂ ಸಹ ಕಾಡಿನ ಕಡೆಗೋ, ಬಯಲಿನ ಕಡೆಗೋ, ಮರಳುಗಾಡಿಗೋ ತನ್ನ ದಾರಿಯನ್ನು ಕಂಡುಕೊಳ್ಳಲು ಸಹಾಯವಾಗುತ್ತದೆ. ಕಾಡಿನಲ್ಲಿ ತಿನ್ನಬಹುದಾದ ಗೆಡ್ಡೆ ಗೆಣಸುಗಳು ಹಣ್ಣುಗಳು ಇತ್ಯಾದಿಗಳ ಬಗ್ಗೆ ಅವನಿಗೆ ತಿಳುವಳಿಕೆ ಮೂಡುತ್ತದೆ. ಪ್ರಾಣಿಗಳಿಗೆ ಇಷ್ಟವಾದ ಆಹಾರದ ಬಗ್ಗೆ ಸಹ ಪರಿಚಯವುಂಟಾಗಿ ಅವುಗಳನ್ನು ಆಕರ್ಷಿಸಲು ಸಹಾಯವಾಗುತ್ತದೆ.

ಇದೇ ರೀತಿ ಜನಸವತಿಯಿರುವ ಪ್ರದೇಶಗಳಲ್ಲಿ ಮನುಷ್ಯರ, ಕುದುರೆಗಳ, ವಾಹನಗಳ - ಸೈಕಲ್ಲು, ಮೋಟಾರು ಇತ್ಯಾದಿ, ಗುರುತುಗಳನ್ನು ಪತ್ತೆ ಹಚ್ಚಲು ಕಲಿತು, ಏನು ನಡೆಯುತ್ತಿದೆ? ಎಂದು ಹೇಳಲು ಬರುತ್ತದೆ. ಸಣ್ಣ ಪುಟ್ಟ ಗುರುತುಗಳನ್ನು ಉದಾ : ಅವುಗಳನ್ನು ಕಾಣಲಾಗದಿದ್ದರೂ - ಇದ್ದಕ್ಕಿದ್ದಂತೆ ಹಕ್ಕಿಯು ಹಾರುವುದು; ಸಮೀಪದಲ್ಲಿ ನಡೆದಾಡುತ್ತಿರುವುದು, ಇತ್ಯಾದಿ ಗಮನಿಸಲು ಬರುತ್ತದೆ.

ಜನರು ಧರಿಸುವ ಬಟ್ಟೆ ಮತ್ತು ಅವರು ನಡೆದುಕೊಳ್ಳುವ ರೀತಿಯನ್ನು ಗಮನಿಸಿ, ತಾಳೆನೋಡಿ, ಆ ವ್ಯಕ್ತಿಗಳ ಬಗ್ಗೆ ಹೇಳಲೂ ಬರುತ್ತದೆ. ಉದಾ : ಅವರು ಕೆಲಸಕ್ಕೆ ಬಾರದವರೆ? ಕಷ್ಟದಲ್ಲಿದ್ದಾರೆಯೆ? ಅನುಕಂಪ ಮತ್ತು ಕರ್ತವ್ಯವನ್ನು - ಕಷ್ಟದಲ್ಲಿರುವವರಿಗೆ ಆದಷ್ಟೂ ರೀತಿಯಲ್ಲಿ ಸಹಾಯ ಮಾಡುವುದು ಪಾಲಿಸಲು ಬರುತ್ತದೆ.

ನೆನಪಿಡಿ - ಸ್ಕೌಟಾದವನು ಇತರರೊಡನೆ ಇರುವಾಗ ಅವರಿಗೆ ಅವನ ಬಗ್ಗೆ ಹಿರಿತನ; ಅಲ್ಪತನ; ನಿಕಟ ವರ್ತನೆ ಅಥವಾ ದೂರವಾಗಿರುವುದು; ಉಚ್ಚ ಅಥವಾ ನೀಚ ಭಾವನೆಗಳು ಇತ್ಯಾದಿ ಕಂಡು ಬರಬಹುದು. ಆ ವಿಷಯವನ್ನು ಅವನು ಈಗಾಗಲೇ ತಾನಾಗಿಯೇ ಕಂಡು ಕೊಳ್ಳದಿದ್ದಲ್ಲಿ ಅದು ಅವನಿಗೇ ಅವಮಾನಕರವಾದುದು.

.....ಮುಂದುವರೆಯುವುದು



# ತರಬೇತಿ ಶಿಬಿರದಲ್ಲಿ ಹೊರ ಸಂಚಾರ - ಒಂದು ಹೊಸ ಪ್ರಯೋಗ

- ಜಿ.ಎ. ನರಗುಂದ, ಹುಬ್ಬಳ್ಳಿ, ಎಲ್.ಟಿ.(ಎಸ್)

ವಯಸ್ಕ ನಾಯಕರ ತರಬೇತಿ ಶಿಬಿರಗಳಲ್ಲಿ (ಪ್ರಮುಖವಾಗಿ ಮೂಲ ತರಬೇತಿಗಳಲ್ಲಿ) ಹೊರ ಸಂಚಾರದ ಅನುಭವವನ್ನು ಶಿಬಿರಾರ್ಥಿಗಳಿಗೆ ನೀಡುವ ಪರಿ ಸಾಮಾನ್ಯವಾಗಿ ಹೀಗಿರುತ್ತದೆ.

ವನ ವಿದ್ಯಾ ಸಂಕೇತ ಅಥವಾ ನಕ್ಷೆ ಬಳಸಿ 5 ಕಿಲೋಮೀಟರ್ ಅಥವಾ 7 ಕಿಲೋಮೀಟರ್ ದೂರದ ಸ್ಥಳ ತಲುಪಿ, ಧ್ವಜಾರೋಹಣ ಮಾಡಿ, ಕೆಲವು ಮಾಹಿತಿ ಸಂಗ್ರಹಿಸಿ, ಸ್ವಲ್ಪ ಸಮುದಾಯ ಸೇವೆ ಮಾಡಿ ಹಿಂದಿರುಗುವುದು.

ಇತ್ತೀಚೆಗೆ ಗದಗ ಜಿಲ್ಲೆಯ ಹುಲಕೋಟಿಯಲ್ಲಿ ಜರುಗಿದ ಮೂಲ ತರಬೇತಿ ಶಿಬಿರದಲ್ಲಿ ಕೆಲವು ಬದಲಾವಣೆಗಳನ್ನು ಮಾಡಿ ಒಂದು ಪ್ರಯೋಗ ಮಾಡಿದೆ ಹಾಗೂ ಯಶಸ್ಸನ್ನು ಕಂಡೆ ಅದು ಹೀಗಿದೆ.

ಹೊರ ಸಂಚಾರಕ್ಕೆ ನಿಗದಿಯಾದ ಹೊಸಹಳ್ಳಿ ಗ್ರಾಮ ತಲುಪಿದ ನಂತರ ಆ ಗ್ರಾಮದ ಓಣಿಗಳಲ್ಲಿ ವನ ವಿದ್ಯಾ ಸಂಕೇತಗಳನ್ನು ಹಾಕಿ, ಪ್ರಮುಖ ಸ್ಥಳಗಳಲ್ಲಿ ಸ್ಕೌಟಿಂಗ್‌ನ ಚಟುವಟಿಕೆಗಳನ್ನು ನೆರೆದವರ ಮುಂದೆ ಪ್ರದರ್ಶಿಸಲಾಯಿತು.

ಪಂಚಾಯತ್ ಕಛೇರಿಯ ಬಳಿ ಸಂದೇಶವನ್ನು ಇರಿಸಲಾಗಿದ್ದು, ಅದರಂತೆ ಅಲ್ಲಿದ್ದ ಜನರಿಗೆ ಪ್ರಥಮ ಚಿಕಿತ್ಸೆಯ ಪ್ರಾತ್ಯಕ್ಷಿಕೆ ನಡೆಸಲಾಯಿತು. ಬ್ಯಾಂಡೇಜ್‌ಗಳು, ತೂಗು ಪಟ್ಟಿಗಳು, ರೋಗಿಯನ್ನು ಸಾಗಿಸುವ ವಿಧಾನ ಇವೇ ಮುಂತಾದವು.

ದೇವಸ್ಥಾನ ತಲುಪಿದಾಗ ಅಲ್ಲಿ ಪ್ರಾರ್ಥನೆ (ದಯಾಕರ್‌ದಾನ್ ಭಕ್ತೀಕಾ) ಪ್ರತಿಜ್ಞೆ ನಿಯಮ ಇತ್ಯಾದಿಗಳ ವಿವರಣೆ. ಪಾಠಶಾಲೆಯ ಬಯಲಿನಲ್ಲಿ, ವಿದ್ಯಾರ್ಥಿಗಳನ್ನು ಕೂಡಿಸಿಕೊಂಡು ಬಿ.ಪಿ. ವ್ಯಾಯಾಮ ಪ್ರದರ್ಶನ ಮಾಡಲಾಯಿತು. ದನಗಳು ಮೇಯುವ ಬಯಲಿನಲ್ಲಿ ಗಂಟುಗಳು ಹಾಗೂ ಲ್ಯಾಷಿಂಗ್ ಪ್ರದರ್ಶನ.

ಒಂದು ಮಸೀದಿಯ ಮುಂದೆ ಸರ್ವಧರ್ಮ ಪ್ರಾರ್ಥನೆ ಮಾಡಲಾಯಿತು. (ಭಗವದ್ಗೀತೆ ಹಾಗೂ ಕುರಾನ್).

ಒಂದು ಮಠದ ಬಳಿ ಸುಧಾರಿತ ಧ್ವಜಸ್ತಂಭ ರಚಿಸಿ ಕೌಶಲ ಪ್ರದರ್ಶಿಸಲಾಯಿತು ಅಲ್ಲಿ ಪ್ರಾರ್ಥನೆಯ ನಂತರ ಸ್ವಾಮಿಗಳಿಂದ ಆಶೀರ್ವಚನ ಪಡೆದು ಶಿಬಿರಕ್ಕೆ ಹಿಂದಿರುಗಲಾಯಿತು.

ಇವಿಷ್ಟು ಕಾರ್ಯಕ್ರಮಗಳನ್ನು ಅರ್ಧ ದಿವಸದ ಹೊರಸಂಚಾರದಲ್ಲಿ ವನವಿದ್ಯಾ ಸಂಕೇತಗಳನ್ನು ಬಳಸಿ ಮಾಡಲಾಯಿತು.

ಇದರಿಂದ ಗ್ರಾಮದ ಜನತೆಗೆ ಸ್ಕೌಟಿಂಗಿನ ಪರಿಚಯ, ಸ್ಕೌಟ್‌ಗಳ ಸೇವಾ ಪ್ರವೃತ್ತಿಯ ಅರಿವು, ಕೌಶಲಗಳ ಪರಿಚಯ ಮಾಡಿಸಿ ತನ್ಮೂಲಕ ಅವರಲ್ಲಿ ಸ್ಕೌಟ್ ಕಾರ್ಯಕ್ರಮಗಳ ಬಗ್ಗೆ ಪ್ರಶಂಸೆ ಮೂಡುವಂತೆ ಮಾಡಲಾಯಿತು. ಗ್ರಾಮದ ಜನತೆಯೂ ಇದರಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರಿಂದ ಸ್ಕೌಟಿಂಗಿನ ಬಗ್ಗೆ ಅವರಲ್ಲಿ ಆಸಕ್ತಿ ಮೂಡಲು ಕಾರಣವಾಯಿತು.

ಶಿಬಿರಾರ್ಥಿಗಳಿಗೆ ತಮ್ಮ ಕಲೆ ಪ್ರದರ್ಶನಕ್ಕೆ ಉತ್ತಮ ಅವಕಾಶ ಹಾಗೂ ಕೌಶಲಗಳ ಪುನರಾವರ್ತನೆಗೆ ಸದವಕಾಶ ದೊರೆತಂತಾಯಿತು.

ಇದೇ ರೀತಿ ಇತರೆ ಕಾರ್ಯಕ್ರಮಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಂಡು ಸಮುದಾಯಕ್ಕೆ ಸ್ಕೌಟಿಂಗ್‌ನ ಸಂದೇಶವನ್ನು ಯಶಸ್ವಿಯಾಗಿ ತಲುಪಿಸಬಹುದು.

# ದಿನಾಂಕ 09-03-2008ರಂದು ಬೆಂಗಳೂರಿನ ಬಸವಭವನದಲ್ಲಿ ಜರುಗಿದ ಆಜೀವ ಸದಸ್ಯರ ರಾಜ್ಯಮಟ್ಟದ ಸಮಾವೇಶದಲ್ಲಿ ಶ್ರೀ ಗೊ.ರು. ಚನ್ನಬಸಪ್ಪನವರು ಮಾಡಿದ ಉದ್ಘಾಟನಾ ಭಾಷಣ

- ಗೊ.ರು. ಚನ್ನಬಸಪ್ಪ

## ಮಾನವ ನಿರ್ಮಾಣ ಇಂದಿನ ಅಗತ್ಯ

**ಲೋಕ** ಪ್ರಸಿದ್ಧ ತತ್ತ್ವಜ್ಞಾನಿ ಜರಾತುಷ್ಟ ಹೇಳಿರುವ ಒಂದು ನುಡಿ ಚಿತ್ರ : "ನನ್ನ ಕಣ್ಣಿಗೆ ಕಾಣುವ ಒಂದು ಭಯಾನಕ ದೃಶ್ಯವೆಂದರೆ, ಮನುಷ್ಯ ಚೂರು ಚೂರಾಗಿರುವುದು; ಕಗ್ಗೊಲೆಯ ಯುದ್ಧ ಭೂಮಿಯಲ್ಲಿ ಬಿದ್ದಂತೆ ಚೆಲ್ಲಿಹೋಗಿರುವುದು". ಆ ದಾರ್ಶನಿಕ ನೋಡುವ ಈ ಮಾನವ ಜಗತ್ತು ಕಟುಕರ ಕಾನನವಾಗಿದೆ.

ಸಹಸ್ರಾರು ವರ್ಷಗಳ ಹಿಂದೆ ಆ ದಾರ್ಶನಿಕ ಹೇಳಿದ ಮಾತು ಇಂದಿಗೂ ಅನ್ವಯವಾಗುತ್ತದೆ. ಅಷ್ಟೇ ಅಲ್ಲ, ಅದಕ್ಕಿಂತಲೂ ಹೆಚ್ಚು ಅನ್ವಯವಾಗುತ್ತದೆ. ಇಂತಹ ಸಂಘರ್ಷ - ಸಂತಾಪಗಳ ಸನ್ನಿವೇಶದಲ್ಲಿ ನಾವೀಗ ವಿಶ್ವ ಸ್ಕೌಟ್ ಶತಮಾನೋತ್ಸವದ ಅಂಗವಾಗಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಆಜೀವ ಸದಸ್ಯರ ರಾಜ್ಯಮಟ್ಟದ ಸಮಾವೇಶಕ್ಕಾಗಿ ಸೇರಿದ್ದೇವೆ.

ಬಹುಶಃ ಇಂತಹುದೊಂದು ರಾಜ್ಯಮಟ್ಟದ ಸಮಾವೇಶದಲ್ಲಿ ನಾನು ಪಾಲುಗೊಳ್ಳುತ್ತಿರುವುದು ಇದೇ ಮೊದಲೆಂದು ಕಾಣುತ್ತದೆ. ಒಂದು ವೇಳೆ ಹಿಂದೇನಾದರು ಇಂತಹ ಸಮಾವೇಶ ನಡೆದಿದ್ದು ನಾನು ಪಾಲುಗೊಂಡಿದ್ದರೆ ಅದು ನನ್ನ ಮರೆವಿನ ಕಾರಣದಿಂದ ನೆನಪು ಹೋಗಿರಬಹುದು.

ಒಂದು ವೇಳೆ ನಮ್ಮ ರಾಜ್ಯ ಆಯುಕ್ತರು ರಾಜ್ಯಮಟ್ಟದ ಈ ಸಮಾವೇಶಕ್ಕೆ ಬದಲಾಗಿ ಅಥವಾ ಇದರ ಜೊತೆಯಲ್ಲಿ ಮರೆವಿನ ಸ್ಪರ್ಧೆಯನ್ನೇನಾದರೂ ಇಟ್ಟಿದ್ದರೆ ಪ್ರಥಮ ಬಹುಮಾನ ಬರಬಹುದಾಗಿದ್ದ ನನ್ನನ್ನು ಈ ಸಮಾವೇಶದ ಉದ್ಘಾಟನೆಗೆ ಕರೆದಿದ್ದಾರೆ. ಸ್ಕೌಟ್ ಚಳವಳಿಯನ್ನು ಮರೆತು ಬಿಟ್ಟಾರು ಎಂಬ ಅನುಮಾನ ಬಂದು ಅದನ್ನು ನೆನಪಿನಲ್ಲಿಡಲೆಂದು ಈ ಕೆಲಸ ಹಚ್ಚಿರಬೇಕೆಂದು ಕಾಣುತ್ತದೆ. ನಿಜ ನಾನೊಬ್ಬ ವೃದ್ಧ; ಆದರೆ ಸ್ಕೌಟ್ ಸೇವೆಗೆ ಸದಾ ಸಿದ್ಧ!

ಸ್ಕೌಟ್ ಮತ್ತು ಗೈಡ್ ಚಳವಳಿಯಲ್ಲಿ ಸದಾ ಕಾರ್ಯಶೀಲರಾಗಿರುವ ಆಜೀವ ಸದಸ್ಯರ ಈ ಸಮಾವೇಶದಲ್ಲಿ ಚಲನಶೀಲತೆಯನ್ನೇ ಕಳೆದುಕೊಂಡಿರುವ ನನ್ನಂಥ ವ್ಯಕ್ತಿ ಏನು ಹೇಳುವುದು? ಆದರೂ ರಾಜ್ಯ ಮುಖ್ಯ ಆಯುಕ್ತರಾದ ಕೆ.ಬಿ. ಷಣ್ಮುಖಪ್ಪನವರು ಮತ್ತು ನಮ್ಮ ಸಂಸ್ಥೆಯ ಪದಾಧಿಕಾರಿಗಳೆಲ್ಲರ ಅಭಿಮಾನ ಮತ್ತು ಈ ಚಳವಳಿಯೊಡನೆ ನನಗಿರುವ ಸಂಬಂಧಗಳಿಂದಾಗಿ ಒಪ್ಪಿ ಬಂದಿದ್ದೇನೆ.

ವಿಶ್ವ ಸ್ಕೌಟ್ ಶತಮಾನೋತ್ಸವದ ಅಂಗವಾಗಿ ನಡೆಯುತ್ತಿರುವ ಈ ಸಮಾವೇಶಕ್ಕೆ ಒಂದು ಮಹತ್ವವಿದೆ ಎಂದು ನಾನು ಭಾವಿಸಿದ್ದೇನೆ. ಇದು ಚಳವಳಿಯು ನೂರು ವರ್ಷ ಕಂಡ ಹರ್ಷದ ಸಂದರ್ಭವೂ ಹೌದು; ಇದುವರೆಗೆ ಈ ಕ್ಷೇತ್ರದಲ್ಲಿ ಇರುವವರು ಇಟ್ಟುಕೊಂಡು ಬಂದಿರುವ ಹೆಜ್ಜೆಗಳನ್ನು ಎಣಿಸಿಕೊಂಡು. ಇನ್ನು ಮುಂದೆ ಇಡಬೇಕಾದ ಹೆಜ್ಜೆಗಳ ಹಾದಿಯನ್ನು ಗುರುತಿಸಿಕೊಳ್ಳುವ ಒಂದು ಗಂಭೀರ ಸಂದರ್ಭವೂ ಹೌದು.

ಆಜೀವ ಸದಸ್ಯರೆಂದರೆ ಬದುಕಿರುವವರೆಗೂ ಚಳುವಳಿಯಲ್ಲಿರುವವರು. ನಿಮಗೆ ಈ ಚಳವಳಿ ಕುರಿತು ಹೇಳುವುದೆಂದರೆ, ನಾವು ನಿಂತಿರುವುದು ಭೂಮಿ, ಮೇಲೆ ಕಾಣುವುದು ಆಕಾಶ ಎಂದು ಹೇಳಿದಂತಾಗುತ್ತದೆ. ಆದ್ದರಿಂದ

ನಾನು ಆ ಸಾಹಸಕ್ಕೆ ಕೈ ಹಾಕುವ ಕೆಲಸ ಮಾಡುವುದಿಲ್ಲ. ಆದರೂ ಆಯುಕ್ತರು ಉದ್ಘಾಟನೆ ಎಂದಿರುವ ಕಾರಣ ಏನಾದರೂ ನಾಲ್ಕು ಮಾತು ಹೇಳಬೇಕಾದ ಅನಿವಾರ್ಯ. ಹಾಗೆ ಏನಾದರೂ ಹೇಳುವುದು ತಪ್ಪಾಗುತ್ತದೆ. (ಹಾಗೆ ನಮ್ಮ ಲಾಲೂ ಪ್ರಸಾದರು ಏನೋ ಹೇಳಿ ಅನಾಹುತ ಮಾಡಿದ್ದನ್ನು ಇತ್ತೀಚೆಗಷ್ಟೇ ಕಂಡಿದ್ದೇವೆ). ಇಲ್ಲೆಲ್ಲ ತಿಳಿದವರೇ ಇದ್ದೀರಿ. ಬದುಕಿನ ಅನುಭವಿಗಳೇ ಇದ್ದೀರಿ. ಈ ಸಮಾವೇಶ ನಡೆಯುತ್ತಿರುವುದು ಅನುಭವ ಮಂಟಪದಲ್ಲಿ.

ಈ ವೇದಿಕೆಯಲ್ಲಿ, ನಿದ್ದೆ ಮಾಡುವಾಗಲೂ ಸ್ಕೌಟ್ ಕನಸನ್ನೇ ಕಾಣುವ ರಾಜ್ಯಾಯುಕ್ತ ಷಣ್ಮುಖಪ್ಪನವರಿದ್ದಾರೆ. ಜಾಗತಿಕ ಮಟ್ಟದಲ್ಲಿ ಕರ್ನಾಟಕಕ್ಕೆ ಹೆಸರು ತಂದಿರುವ ಖಾಲಿದ್ ಇದ್ದಾರೆ. ಪರಿಸರ ಪ್ರಜ್ಞಾವಂತ ಸುರೇಶ್ ಹೆಬ್ಳೀಕರ್ ಇದ್ದಾರೆ. ಪ್ರಗತಿಶೀಲ ವಿಚಾರದ ಪ್ರಭಾಕರ್ ಇದ್ದಾರೆ. ಮೌನದಲ್ಲೇ ಮಾತನಾಡುವ ಮಹಮದ್ ಜಾಹಿರುದ್ದೀನ್ ಇದ್ದಾರೆ. ಸಾರ್ವಜನಿಕ ಸೇವೆಯನ್ನು ರಕ್ತಗತ ಮಾಡಿಕೊಂಡಿರುವ ರತ್ನಕುಶನೂರ ಇದ್ದಾರೆ. ಶೋಕಾಸ್ ನೋಟೀಸ್ ನೀಡಿಯೇ ಶಿಸ್ತಿನ ಕಾರ್ಯನಿರ್ವಹಿಸುವ ಲೂಕಾಸ್ ಇದ್ದಾರೆ. ಯಾವುದೇ ತವಕವಿಲ್ಲದ ಶಿವಮಹಾದೇವ್ ಇದ್ದಾರೆ. ಸ್ವಭಾವ ಶಾಂತಿಯ ಪ್ರಭುದೇವ್ ಚಿಗಟೇರಿ ಇದ್ದಾರೆ. ಖ್ಯಾತಿ ಬಯಸದ ಗೀತಾ ನಟರಾಜ್ ಇದ್ದಾರೆ. ಸ್ಥಾನವಿಲ್ಲದೆಯೂ ಸೇವೆ ಸಲ್ಲಿಸುವ ಶ್ರೀನಿವಾಸನ್ ಇದ್ದಾರೆ. ಎಲ್ಲಕ್ಕೂ ಮಿಗಿಲಾಗಿ ಆಡಿದರೆ ಸ್ಕೌಟನ್ನೇ ಆಡುವೆ, ಹಾಡಿದರೆ ಗೈಡನ್ನೇ ಹಾಡುವೆ ಎನ್ನುವ ಛಲ ತೊಟ್ಟಿರುವ ನೀವೆಲ್ಲ ಇದ್ದೀರಿ. ನಿಮ್ಮ ಮುಂದೆ ಸಮವಸ್ತ್ರವನ್ನೂ ಧರಿಸದ ನಾನು ಸಮರ್ಪಕವಾಗಿ ಏನು ಹೇಳಬಲ್ಲೆ!

ಅದೇ ಸ್ಕೌಟ್ ಎಂದರೆ ಶೋಧಕ, ಸಾಧಕ, ಸೇವಕ, ರಕ್ಷಕ, ಸಾತ್ವಿಕ ಎಂದೋ, ಗೈಡ್ ಎಂದರೆ ಮಾರ್ಗದರ್ಶಿ, ನಿರ್ದೇಶಕಿ, ಸಹಾಯಕಿ, ಸೇವಕಿ, ಪಾಲಕಿ ಎಂದೋ ಹೇಳಬೇಕು ಅಷ್ಟೆ. ಆದರೆ ಆ ಎಲ್ಲ ಅರ್ಥಗಳೇ ನೀವಾಗಿದ್ದೀರಿ. ಲೋಕ ಜೀವನದ ಸಿಹಿ-ಕಹಿಗಳನ್ನೆಲ್ಲಾ ಕಂಡಿರುವ, ಸ್ವಂತಕ್ಕಿಂತ ಸಂಸ್ಥೆ ದೊಡ್ಡದು ಎಂದು ಭಾವಿಸಿರುವ ನಿಮ್ಮ ಮುಂದೆ ನಮ್ಮ ಚಳವಳಿಯ ಹಿನ್ನೆಲೆಯಲ್ಲೇ ಒಂದೆರಡು ಚಿಂತನೆಗಳನ್ನು ಹಂಚಿಕೊಳ್ಳುವುದೇ ಸಮಾವೇಶದ ಉದ್ಘಾಟನೆ ಎಂದು ನಾನು ತಿಳಿದಿದ್ದೇನೆ.

ವಾಸ್ತವವಾಗಿ, ಸ್ಕೌಟ್ ಮತ್ತು ಗೈಡ್ ಸತ್ಯ ಶೋಧನೆಯ ಮತ್ತು ನಿತ್ಯ ಸಾಧನೆಯ ಚಳವಳಿ. ಇಂತಹ ಮೌಲಿಕವಾದ ಚಳವಳಿಯ ಚೆಲುವನ್ನು ಸಹಿಸದವರೂ ಇರಬಹುದು. ಇದರ ಬೆಳವಣಿಗೆಗೆ ಬೇಕಾದ ನೆರವೂ ದೊರೆಯದಿರಬಹುದು. ಎಷ್ಟೋ ಸಲ ನಮ್ಮ ನಿರೀಕ್ಷೆಗಳೇ ನಿರಾಸೆಯುಂಟು ಮಾಡಬಹುದು, ಕೆಲವು ಸಂದರ್ಭಗಳಲ್ಲಿ ನಮ್ಮ - ನಮ್ಮಲ್ಲೇ ಪರಸ್ಪರ ಅರಿವಿನ ಕೊರತೆಯಿಂದಾಗಿ ಒಟ್ಟು ಸಂಘಟನೆಗೆ ಭಂಗವುಂಟಾಗುವ ಸನ್ನಿವೇಶಗಳೂ ಬರಬಹುದು. ಚಳವಳಿಯ ದೀಕ್ಷೆ ವಹಿಸಿದವರನ್ನು ದಿಕ್ಕು ತಪ್ಪಿಸುವ ಹೊರಗಿನ ಶಕ್ತಿಗಳೂ ಇರಬಹುದು.

ಇವೆಲ್ಲ ಏನೇ ಇದ್ದರೂ, ಅವನ್ನೆಲ್ಲ ಸವಾಲುಗಳೆಂದು ಸ್ವೀಕರಿಸಿ ಸಂಘಟನೆಯ ಸಮಗ್ರತೆಯನ್ನು ಸಂರಕ್ಷಿಸಿಕೊಂಡು ಹೋಗುವುದೇ ಈ ಚಳವಳಿಯ ವೈಶಿಷ್ಟ್ಯ; ಅದರಲ್ಲಿ ಅಂತರ್ಗತವಾಗಿರುವ ಶಕ್ತಿ - ಸಾಮರ್ಥ್ಯ.

ಒಂದು ಸ್ವಾರಸ್ಯದ ದೃಷ್ಟಾಂತವಿದೆ. ಒಂದು ಸಲ ಒಂದು ಹಿರಿಯ ಭೂತದ ಬಳಿ ಒಂದು ಕಿರಿಯ ಭೂತ ಓಡಿ ಬಂದು, "ಏನಿದು ಹಿರಿಯ? ನೀನು ಈ ಮರದ ಕೆಳಗೆ ನಿಶ್ಚಿಂತೆಯಿಂದ ಕುಳಿತಿರುವೆಯಲ್ಲ. ನೀನು ಕೇಳಿಲ್ಲವೆ? ಯಾರೋ ಒಬ್ಬ ವ್ಯಕ್ತಿ ಸತ್ಯವನ್ನು ಕಂಡು ಹಿಡಿದಿದ್ದಾನಂತೆ. ನಾವೀಗ ತ್ವರಿತವಾಗಿ ಏನಾದರೂ ಮಾಡಬೇಕು. ಇಲ್ಲವಾದರೆ ನಮ್ಮ ಅಸ್ತಿತ್ವಕ್ಕೇ ಅಪಾಯ ಒದಗಿಬಿಡುತ್ತದೆ. ನಮ್ಮ ವೃತ್ತಿಗೆ ಆತಂಕವುಂಟಾಗಿ ಬಿಡುತ್ತದೆ. ಅವನು ತನ್ನ ಸತ್ಯದ ಕೊಡಲಿಯಿಂದ ನಮ್ಮ ಅಸ್ತಿತ್ವದ ಬೇರುಗಳನ್ನೇ ಕತ್ತರಿಸಿಬಿಡಬಹುದು. ನೀನು ಹೀಗೆ ಸುಮ್ಮನೆ ಕುಳಿತರೆ ಹೇಗೆ?" ಎಂದಿತು.

ಆಗ ಹಿರಿಯ ಭೂತ ನಕ್ಕು 'ಅಯ್ಯೋ ಮರಿ, ಶಾಂತ ನಾನು. ನೀನಿನ್ನೂ ಹೊಸಬ. ಹಾಗಾಗಿ ನೀನು ಕಳವಳಕ್ಕೆ ಒಳಗಾಗಿರುವೆ. ನೀನೇನೂ ಚಿಂತಿಸಬೇಕಾಗಿಲ್ಲ. ನಾನು ಆ ಸತ್ಯಸೋಧಕನನ್ನು ಕಟ್ಟಿಹಾಕಲು ಸೂಕ್ತ ಜನರನ್ನು ಬಿಟ್ಟಿದ್ದೇನೆ. ಅವರು ಈಗಾಗಲೇ ಆ ಕೆಲಸ ಆರಂಭಿಸಿದ್ದಾರೆ' ಎಂದಿತು. ಅದಕ್ಕೆ ಕಿರಿಯ ಭೂತ, "ಯಾರವರು? ನನಗೆ ಯಾರೂ ಕಾಣಿಸಲಿಲ್ಲ ಎಲ್ಲಿ?" ಎಂದಿತು. ಆಗ ಹಿರಿಯ ಭೂತ, "ನಾನು ನಾನಾ ರೀತಿಯಲ್ಲಿ ಈ ಕೆಲಸ ಮಾಡುತ್ತೇನೆ. ಅಲ್ಲಿ ಪಂಡಿತರಿದ್ದಾರೆ, ಪುರೋಹಿತರಿದ್ದಾರೆ, ರಾಜಕಾರಣಿಗಳಿದ್ದಾರೆ. ನೀನು ಚಿಂತಿಸಬೇಡ. ಅವರು ಸತ್ಯ ಸಿದ್ಧಾಂತದ ಪರ-ವಿರೋಧವಾಗಿ ಎಷ್ಟು ಸದ್ದು ಮಾಡುತ್ತಾರೆ ಎಂದರೆ, ಅವರ ಅಬ್ಬರದಲ್ಲಿ ಸಣ್ಣ ದನಿಯ ಸತ್ಯದ ಸದ್ದೂ ಅಡಗಿಹೋಗಿ ಬಿಡುತ್ತದೆ. ನಾವಾರೂ ಚಿಂತಿಸಬೇಕಾಗಿಲ್ಲ. ಆ ಪಂಡಿತ - ಪುರೋಹಿತ - ರಾಜಕಾರಣಿಗಳು ಬೇರಾರೂ ಅಲ್ಲ; ನಮ್ಮ ಜನರೇ. ನಮ್ಮ ಪರವಾಗೇ ಅವರೆಲ್ಲ ಕಾರ್ಯನಿರತರಾಗಿದ್ದಾರೆ. ನಾನು ಅವರ ಮೂಲಕವೇ ನನ್ನ ಎಲ್ಲ ಕಾರ್ಯತಂತ್ರಗಳನ್ನು ಬಳಸುತ್ತಿದ್ದೇನೆ. ಅವರು ನನ್ನ ಸೇವೆಯನ್ನೇ ಮಾಡುತ್ತಿದ್ದಾರೆ. ಅವರು ನಮ್ಮ ರೂಪದಲ್ಲಿ ಕಾಣಿಸಿಕೊಳ್ಳವಂತಿಲ್ಲ. ಏನಿದ್ದರೂ ಮಾರುವೇಷದಲ್ಲೇ ಇರಬೇಕು. ಅವರೆಲ್ಲ ನಮ್ಮ ಲೋಕದ ಹಿರಿಯ ಭೂತಗಳೇ, ಅವರೀಗ ನಾನು ಕೊಟ್ಟ ಸೂಚನೆಯ ಪ್ರಕಾರ ಆ ಸತ್ಯಶೋಧಕನನ್ನು ಮುತ್ತಿಕೊಂಡಿದ್ದಾರೆ. ಅವನೀಗ ಏನೂ ಮಾಡುವಂತಿಲ್ಲ. ಸಧ್ಯದಲ್ಲೇ ಅವನು ಸಾಯುವುದು ನಿಶ್ಚಿತ. ಅವನಿಗೂ ವಯಸ್ಸಾಗಿದೆ. ಅವನು ಹೋದ ನಂತರ ನಮ್ಮ ಜನರೇ ಪ್ರತಿನಿಧಿಗಳಾಗಿ ಅಲ್ಲಿನ ಇಡೀ ವ್ಯವಹಾರಗಳನ್ನೆಲ್ಲಾ ನೋಡಿಕೊಳ್ಳುತ್ತಾರೆ".

"ಈ ನಮ್ಮ ಪ್ರತಿನಿಧಿಗಳು ಇರುವುದೇ ಪ್ರೇತ ಸೇವೆಗೆ, ಹೊರತು ಪರಮಾತ್ಮನ ಸೇವೆಗಲ್ಲ, ಪ್ರಜೆಗಳ ಸೇವೆಗಂತೂ ಅಲ್ಲವೇ ಅಲ್ಲ. ತರ್ಕದ ತಾಕಲಾಟದಲ್ಲಿ, ಕೂದಲು ಸೀಳುವ ವಾದಗಳಲ್ಲಿ ಅವರು ನಿರತರಾಗಿದ್ದಾರೆ. ಸತ್ಯ ಅತ್ತಿತ್ತ ಅಲುಗಾಡದಂತೆ ಅವರ ಮಧ್ಯೆ ಸಿಕ್ಕಿಕೊಂಡಿದೆ. ನೀನೇಕೆ ಹೆದರುವೆ?" ಎಂದು ಹೇಳಿದಂತೆ ಆ ಹಿರಿಯ ಭೂತ!

ಇದೊಂದು ಸಾಂಕೇತಿಕ ದೃಷ್ಟಾಂತ. ಈ ಭೂತಚೇಷ್ಟೆ ಇಡೀ ಜಗತ್ತಿನಾದ್ಯಾಂತ ನಡೆಯುತ್ತಿದೆ. ಸೇವೆಯ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ, ದೇವರ ಹೆಸರಿನಲ್ಲಿ ಇಡೀ ಜನಸಮುದಾಯವನ್ನು ತತ್ತರಿಸುವಂತೆ ಮಾಡಿರುವ ಈ ದುಷ್ಟ ಶಕ್ತಿಗಳೇ ಎಲ್ಲೆಲ್ಲೂ ತಮ್ಮ ಕಿರಾತನೃತ್ಯ ನಡೆಸಿವೆ. ಬದುಕಿನ ಸಮಸ್ತ ಕ್ಷೇತ್ರದ ಮೇಲೂ ಕ್ರೌರ್ಯದ ಕತ್ತಲನ್ನು ಕವಿಸಿಬಿಟ್ಟಿವೆ. ಏನಿದ್ದರೂ ಈ ಕತ್ತಲೆಗೆ ಹೆದರದ ದಿಟ್ಟ ಪ್ರಜ್ಞೆಯನ್ನು ನಾವು ಬೆಳೆಸಿಕೊಳ್ಳಬೇಕು. ಪ್ರಜ್ಞೆ ಒಂದು ಬೆಳಕಿದ್ದಂತೆ, ಅದು ಎಷ್ಟೆ ಕಿರಿದಾಗಿದ್ದರೂ ಎಷ್ಟೆ ದೊಡ್ಡದಾಗಿರುವ ಕತ್ತಲೆಗಿಂತ ಶಕ್ತವಾದದ್ದು. ವಾಸ್ತವವವಾಗಿ ಕತ್ತಲೆಗೆ ಇರುವುದು ಶಕ್ತಿಯಲ್ಲ; ಯುಕ್ತಿ. ಆದರೆ ಬೆಳಕು ಒಂದು ಶಕ್ತಿ!

ಪ್ರಜ್ಞಾವಂತ ಯಾವಾಗಲೂ ಸತ್ಯಮಾರ್ಗವನ್ನೇ ಹಿಡಿಯುತ್ತಾನೆ. ಆ ಮಾರ್ಗ ಪಾಂಡಿತ್ಯ, ಪೌರೋಹಿತ್ಯ, ರಾಜಕೀಯ - ಈ ಎಲ್ಲ ಶಕ್ತಿಗಳನ್ನು ಮೀರಿದ್ದು. ಸತ್ಯದ ಸೌಂದರ್ಯವನ್ನು ನಾಶಗೊಳಿಸಲು, ಅದರ ಅಸ್ತಿತ್ವವನ್ನು ಅಲ್ಲಗೆಳೆಯಲು ಯಾವ ಶಕ್ತಿಗೂ ಸಾಧ್ಯವಿಲ್ಲ. ಹೆಚ್ಚೇನು! ಅಪ್ರಜ್ಞೆಯ ವ್ಯಕ್ತಿ ಅದರ ಹತ್ತಿರಕ್ಕೆ ಹೋಗಲೂ ಹೆದರುತ್ತಾನೆ. ಏಕೆಂದರೆ, ಸತ್ಯದ ಬೆಳಕು ಅವನ ಮೈ ಮೇಲೆ ಬಿತ್ತೆಂದರೆ ಅವನ ಹುಳುಕೆಲ್ಲ ಬಯಲಾಗಿ ಬಿಡುತ್ತದೆ. ಹಾಗಾಗಿ ಅವನು ಸತ್ಯದಿಂದ ಸಾಧ್ಯವಾದಷ್ಟು ದೂರ ಇರಲು ಪ್ರಯತ್ನಿಸುತ್ತಾನೆ.

ಆದರೆ ಸ್ಕೌಟ್ ಮತ್ತು ಗೈಡ್ ಸಿದ್ಧಾಂತವನ್ನು ಅಂಗೀಕರಿಸಿದ ವ್ಯಕ್ತಿ ಮಾತ್ರ ಸದಾ ಸತ್ಯದ ಬೆಳಕಿನಲ್ಲೇ ನಡೆಯುತ್ತಾನೆ. ಕತ್ತಲೆಯು ಇರುವಲ್ಲಿಗೆ ಬೆಳಕಿನ ದೀಪ ಒಯ್ದು ಆ ಕತ್ತಲನ್ನು ಕಳೆಯುತ್ತಾನೆ. ಅಜ್ಞಾನ ಇರುವಲ್ಲಿ ಪ್ರಜ್ಞಾನದ ಬೆಳಕು ಚೆಲ್ಲುತ್ತಾನೆ. ನೋವು ಇರುವಲ್ಲಿ ನಲಿವಿನ ಚೆಲವು ಮೂಡಿಸುತ್ತಾನೆ. ಘರ್ಷಣೆಯ ಸಂಕಟವಿರುವಲ್ಲಿ ಸಾಮರಸ್ಯದ ಸಂತಸ ತರುತ್ತಾನೆ. ಸ್ಕೌಟ್ ಮತ್ತು ಗೈಡ್ ಚಳುವಳಿಯ ಅಂತಃಸತ್ವವೇ ಇದು.

ಮಾನವನ ಎಲ್ಲ ಆಗು - ಹೋಗುಗಳಿಗೂ ಅವನ ಮನಸ್ಸೇ ಕಾರಣ. ಮನಸ್ಸು ಯಾವಾಗಲೂ ಒಡೆಯುವ ಕೆಲಸ ಮಾಡುವುದೇ ಹೆಚ್ಚು. ಅದೊಂದು ವಿಚಿತ್ರ ವ್ಯವಸ್ಥೆ. ಈ ಮನಸ್ಸನ್ನು ನಾವು ಹದಗೊಳಿಸದ ಕಾರಣ ಅನೇಕ ಅನಾಹುತಗಳಿಗೆ ಸಮುದಾಯವನ್ನು ಬಲಿಕೊಡುತ್ತಿದ್ದೇವೆ.

ಕಣ್ಣೆದುರಿಗೇ ನಡೆಯುವ ಹೆಣ್ಣಿನ ಮಾರಾಟ ನೋಡುತ್ತೇವೆ. ರಾಜಕೀಯ ಮತ್ತು ಕೋಮು ದ್ವೇಷದ ದಳ್ಳುರಿಗೆ ಪ್ರತಿನಿತ್ಯವೂ ಸಹಸ್ರಾರು ಅಮಾಯಕರು ಸಾವನ್ನಪ್ಪುತ್ತಿದ್ದಾರೆ. ಭ್ರಷ್ಟಾಚಾರದ ಬೇರನ್ನೇ ಕಿತ್ತು ಹಾಕುತ್ತೇವೆ ಎಂದು ಹೇಳುವವರೇ ಅದರ ಬಾವಿಗೆ ಬಿದ್ದು ಈಜಾಡುತ್ತಾರೆ. ವೇದಿಕೆಯ ಮೇಲೆ ಶೀಲ - ಚಾರಿತ್ರ್ಯಗಳನ್ನು ಬೋಧಿಸುವವರೇ ಶೀಲಹರಣದ ಹಗರಣಗಳಲ್ಲಿ ಮುಳುಗುತ್ತಾರೆ. ಶ್ರಮದ ದುಡಿಮೆಯಿಂದ ಮಾತ್ರ ದೇಶ ಕಟ್ಟಲು ಸಾಧ್ಯ ಎಂದು ಹೇಳುತ್ತಲೇ ಶ್ರಮ ಜೀವಿಗಳಾದ ರೈತರ ಮತ್ತು ಕಾರ್ಮಿಕರ ಬೆನ್ನು ಮುರಿಯುತ್ತಾರೆ. ಜ್ಞಾನ ದೇಗುಲವೆಂದು ಪವಿತ್ರ ಹೆಸರಿನಿಂದ ಕರೆಯಲ್ಪಡುವ ವಿಶ್ವವಿದ್ಯಾಲಯಗಳ ಆವರಣಗಳೇ ಅವ್ಯವಹಾರಗಳ ಅಂಗಳಗಳಾಗಿವೆ. ಜನ ಸಮುದಾಯದಲ್ಲಿ ಸಾತ್ವಿಕ ಬದುಕಿನ ಸಂದೇಶ ಬಿತ್ತಬೇಕಾದ ಮಠ - ಮಂದಿರಗಳೇ ಗೊಂದಲದ ಬೀಡಾಗಿವೆ. ವಿಚಾರವಾದಿಗಳು, ಬುದ್ಧಿಜೀವಿಗಳು, ಎದು ಕರೆದುಕೊಳ್ಳುವವರೆಲ್ಲ ವಿವೇಕ ಹೀನರಾಗಿ ಮಾತಿನ ಬಲೆಯನ್ನು ಬೀಸುತ್ತ ತಮ್ಮ ವ್ಯಕ್ತಿ ಪ್ರತಿಷ್ಠೆ, ಪ್ರಚಾರ ಮತ್ತು ಸ್ಥಾನಮಾನ ಪಡೆಯುವಲ್ಲಿ ತೊಡಗಿದ್ದಾರೆ. ಕೇವಲ ಅಧಿಕಾರದ ಚಾಲನೆಯಿಂದ ಪ್ರಜಾಪ್ರಭುತ್ವವನ್ನು ಅಣಕಿಸುವಂತಹ ರಾಜಕೀಯ ಪಕ್ಷಗಳು ಹುಟ್ಟುಕೊಳ್ಳುತ್ತಿವೆ. ಹತ್ತಾರು ಬಗೆಯ ಚುನಾವಣೆಗಳಿಗಾಗಿ ಕೋಟ್ಯಂತರ ಮೊತ್ತದ ಹಣ ವೆಚ್ಚ ಮಾಡುತ್ತೇವೆ. ಕೋಮು ಸಾಮರಸ್ಯ, ಕುಟುಂಬ ಸಾಮರಸ್ಯಗಳ ಬೆಂಕಿ ಹಚ್ಚುತ್ತೇವೆ. ಲಕ್ಷ ಲಕ್ಷಾಂತರ ಗ್ರಾಮೀಣ ಜನ ಅರೆ ಹೊಟ್ಟೆ ಅರೆಮೈಗಳಿಂದ ಪಾಡು ಪಡುತ್ತಿದ್ದರೂ ನಗರ ಜೀವನದ ಮೋಜು ನಡೆಯುತ್ತಲೇ ಇದೆ.

ಹೀಗೆ ನೂರೆಂಟು ಬಗೆಯ ನೂರಾರು ಸಾವಿರ ಅನ್ಯಾಯ ಅವ್ಯವಹಾರಗಳಿಗೆ ನಾವು ಮೂಕ ಸಾಕ್ಷಿಯಾಗಿದ್ದೇವೆ. ಸಾಮಾನ್ಯ ಜನರಂತೂ ಒಂದು ರೀತಿಯ ಅನಾಥ ಪ್ರಜ್ಞೆ ಅನುಭವಿಸುತ್ತಿದ್ದಾರೆ.

ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ, ಕಳವಳದ ಕತ್ತಲಲ್ಲಿ ನಮಗಿರುವ ಆಸೆಯ ಬೆಳಕೆಂದರೆ ಮಕ್ಕಳು. ಈ ಮಕ್ಕಳು ಅವ್ಯವಸ್ಥೆ, ಅಶಿಸ್ತು, ಅಸಂಗತಗಳು ಮತ್ತು ಅನೈತಿಕತೆಗಳ ಬಲೆಗೆ ಸಿಲುಕದಂತೆ ನೋಡಿಕೊಳ್ಳಲು ಸಾಧ್ಯವಿರುವ ಏಕಮಾತ್ರ ಮಹತ್ವಪೂರ್ಣ ಮಾಧ್ಯಮವೆಂದರೆ ಸ್ಕೌಟ್ ಮತ್ತು ಗೈಡ್ ಚಳವಳಿ. ಈ ಚಳವಳಿಯ ಸಿದ್ಧಾಂತಕ್ಕೆ ಬದ್ಧರಾದವರೆಲ್ಲ ಸಂಘಟನೆಗೆ ಯಾವುದೇ ಕಳಂಕ ತಗುಲದಂತೆ ನೋಡಿಕೊಂಡು ಅದನ್ನು ಮತ್ತಷ್ಟು ಬಲಪಡಿಸಿ ಶುದ್ಧವಾಗಿ ಬೆಳೆಸಬೇಕೆಂದು ನಾನು ಮನವಿ ಮಾಡಿಕೊಳ್ಳುತ್ತೇನೆ. ಈ ಸಂಘಟನೆಯಲ್ಲಿ ಯಾವ ಕಾರಣಕ್ಕೂ ಅಸಹನೆ. ಅಸಹಕಾರಗಳ ವಿಷ ಗಾಳಿ ಸುಳಿಯದಂತೆ ನೋಡಿಕೊಳ್ಳಬೇಕು. ಇಲ್ಲಿ ಸಹನೆ ಮತ್ತು ಸೌಹಾರ್ದಗಳ ತಿಳಿಗಾಳಿ ತುಂಬಿಕೊಳ್ಳಬೇಕು.

ಈ ಮಹಾನ್ ಚಳವಳಿಯ ಶತಮಾನೋತ್ಸವ ಸಂದರ್ಭದಲ್ಲಿ ನಾವೆಲ್ಲ ಅಂತಹ ಶುದ್ಧ ಸಂಕಲ್ಪ ಮಾಡಬೇಕು. ಇಲ್ಲಿಗೆ ಸುಮಾರು ಒಂದು ನೂರು ವರ್ಷಗಳ ಹಿಂದೆ ತತ್ವಜ್ಞಾನಿ ಆಂಟೋನಿ ಡಿ ಸೇಯಿಂಟ್ ಎಂಬಾತ ಹೇಳಿರುವ ಮಾತಿನೊಂದಿಗೆ ನನ್ನ ಉದ್ಘಾಟನಾ ನುಡಿಗಳನ್ನು ಮುಗಿಸುತ್ತೇನೆ : "*Life has taught us that love does not consist in gazing at each other, but in looking together in the Same direction*" ಎಂದರೆ ಪ್ರೇಮ ಎನ್ನುವುದು ಪರಸ್ಪರ ದುರುಗುಟ್ಟಿಕೊಂಡು ನೋಡುವುದರಲ್ಲಿ ಇಲ್ಲ; ಇಬ್ಬರೂ ಒಂದಾಗಿ ಒಂದೇ ದಿಕ್ಕಿನಲ್ಲಿ ನೋಡುವುದರಲ್ಲಿದೆ.

ಹಾಗೆ ನಾವೆಲ್ಲ ಒಂದಾಗಿ ಒಂದೇ ದಿಕ್ಕಿನತ್ತ ನೋಡೋಣ.



ರಾಜ್ಯ ವಾರ್ತೆ

# ರಾಜ್ಯ ಸಂಸ್ಥೆಯ ಅಜೀವ ಸದಸ್ಯರುಗಳ ರಾಜ್ಯ ಮಟ್ಟದ ಸಮಾವೇಶ

ಮೇಲ್ಕಂಡ ಸಮಾವೇಶವು ದಿನಾಂಕ 09-03-2008 ರಂದು ಬೆಂಗಳೂರಿನ ಬಸವ ಭವನದ ಅನುಭವ ಮಂಟಪದಲ್ಲಿ ಜರುಗಿತು. ಅಖಿಲ ಕರ್ನಾಟಕ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಹಾಗೂ ರಾಜ್ಯ ಸಂಸ್ಥೆಯ ಪ್ರಕಟಣಾ ಸಮಿತಿಯ ಅಧ್ಯಕ್ಷರು ಆದ ಶ್ರೀ ಗೊ.ರು. ಚನ್ನಬಸಪ್ಪನವರು ಸಮಾವೇಶವನ್ನು ಉದ್ಘಾಟಿಸಿ ಶುಭ ಹಾರೈಸಿದರು. ವಕ್ಫ್ ಮಂಡಳಿಯ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು ಹಾಗೂ ಏಷ್ಯ ಫೆಸಿಫಿಕ್ ಪ್ರಾಂತ್ಯದ ಉಪ ಸಮಿತಿಯ ಅಧ್ಯಕ್ಷರು ಆದ ಶ್ರೀ ಎಂ.ಎ. ಖಾಲಿದ್ ಅವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಸದಸ್ಯರಿಗೆ ಪ್ರತಿಜ್ಞೆ ಬೋಧಿಸಿ ಶುಭ ಹಾರೈಸಿದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಸಮಾವೇಶದ ಉಪಸಮಿತಿಯ ಅಧ್ಯಕ್ಷರು ಹಾಗೂ ಮಾಜಿ ರಾಜ್ಯ ಕಾರ್ಯದರ್ಶಿಗಳು ಆದ ಶ್ರೀ ಎ. ಶಿವಮಹಾದೇವನ್‌ರವರು ಸ್ವಾಗತಿಸಿದರು. ರಾಜ್ಯ ಸ್ಕೌಟ್ ಆಯುಕ್ತರಾದ ಶ್ರೀ ಸಿ.ಆರ್. ಮೊಹಮ್ಮದ್ ಜಹೀರುದ್ದೀನ್, ರಾಜ್ಯ ಸಂಸ್ಥೆಯ ಹಿರಿಯ ಉಪಾಧ್ಯಕ್ಷೆ ಶ್ರೀಮತಿ ಎಂ.ಜಿ. ಬೋಪಯ್ಯ, ಸ್ಕೌಟ್ ಶತಮಾನೋತ್ಸವ ಸಮಿತಿಯ ಅಧ್ಯಕ್ಷರು ಹಾಗೂ ಸಹಾಯಕ ರಾಜ್ಯ ಆಯುಕ್ತರಾದ ಶ್ರೀ ಟಿ.ಎಸ್. ಲೂಕಾಸ್, ರಾಜ್ಯಕಾರ್ಯದರ್ಶಿಗಳಾದ ಶ್ರೀ ಸುರೇಶ್ ಹೆಬ್ಳೀಕರ್, ರಾಜ್ಯ ಕೋಶಾಧಿಕಾರಿಗಳಾದ ಶ್ರೀ ಟಿ. ಪ್ರಭಾಕರ್, ಸಮಾವೇಶ ಸಮಿತಿಯ ಸಂಚಾಲಕರಾದ ಶ್ರೀ ಪ್ರಭುದೇವ ಚಿಗಟೇರಿ ಮುಂತಾದವರು ವೇದಿಕೆಯಲ್ಲಿ ಉಪಸ್ಥಿತರಿದ್ದರು. ಜಂಟಿ ರಾಜ್ಯ ಕಾರ್ಯದರ್ಶಿ ಶ್ರೀ ಎನ್. ಶ್ರೀನಿವಾಸನ್ ಸಭೆಯ ಅಂತ್ಯದಲ್ಲಿ ಎಲ್ಲರನ್ನು ವಂದಿಸಿದರು. ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ನಾರಾಯಣ ಶೆಟ್ಟಿ, ಕಾರ್ಯಕ್ರಮ ನಿರೂಪಿಸಿದರು.

ನಂತರ ನಡೆದ ಕಾರ್ಯಕ್ರಮದಲ್ಲಿ ವಿಶ್ವ ಸ್ಕೌಟ್ ಸಂಸ್ಥೆ ಮತ್ತು ವಿಶ್ವ ಗೈಡ್ಸ್ ಸಂಸ್ಥೆಯ ಧ್ಯೇಯ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ದರ್ಶನ, ಅಜೀವ ಸದಸ್ಯರುಗಳ ಜವಾಬ್ದಾರಿ ಇವೇ ಮುಂತಾದವುಗಳ ಬಗ್ಗೆ ಶ್ರೀ ಟಿ.ಎಸ್. ಲೂಕಾಸ್ ಮತ್ತು ಶ್ರೀ ಎನ್. ಶ್ರೀನಿವಾಸನ್‌ರವರು ಮಾಹಿತಿ ನೀಡಿದರು. ಭೋಜನಾ ನಂತರದ ಅವಧಿಯಲ್ಲಿ ಕರ್ನಾಟಕ ರಾಜ್ಯದ ಸ್ಕೌಟ್ ಗೈಡ್ ಚಟುವಟಿಕೆಗಳ ಬಗ್ಗೆ ರಾಜ್ಯ ಸಂಸ್ಥೆಯು ತಯಾರಿಸಿದ "ಭರವಸೆಯ ಬೆಳಕು" ಎಂಬ ಸಾಕ್ಷ್ಯ ಚಿತ್ರ ಮತ್ತು ಇತ್ತೀಚೆಗೆ ಲಂಡನ್‌ನಲ್ಲಿ ನಡೆದ 21ನೇ ವಿಶ್ವ ಸ್ಕೌಟ್ ಜಾಂಬೂರಿಯ ಬಗ್ಗೆ ಚಿತ್ರ ಪ್ರದರ್ಶನ ನಡೆಯಿತು. ಸಂಜೆ 4.00 ಘಂಟೆಗೆ ಸಮಾವೇಶ ಮುಕ್ತಾಯಗೊಂಡಿತು.



# ಜಿಲ್ಲಾ ವಾರ್ತೆ

## ಬೆಂಗಳೂರು ಉತ್ತರ ಜಿಲ್ಲೆ

ದಿನಾಂಕ : 01-03-2008 ರಂದು ನಿರ್ಮಲ ರಾಣಿ ಇಂಗ್ಲಿಷ್ ಪ್ರೈಮರಿ ಶಾಲೆ, ಮಲ್ಲೇಶ್ವರಂನ ನಿರ್ಮಲ ರಾಣಿ ರಾಣಿ ಗೈಡ್ಸ್ ಕಂಪೆನಿಯ ವಿದ್ಯಾರ್ಥಿನಿಯರು ಕೇಂದ್ರ ಕಾರಾಗೃಹ ಪರಪ್ಪನ ಅಗ್ರಹಾರ, ಬೆಂಗಳೂರು, ಮಹಿಳಾ ವಿಭಾಗ ಇಲ್ಲಿಗೆ ಭೇಟಿ ನೀಡಿ ಮಹಿಳಾ ಬಂದಿಗಳೊಂದಿಗೆ ವಿಚಾರ ವಿನಿಯಮ ಮಾಡಿಕೊಂಡರು. ಇಲ್ಲಿನ ಮಕ್ಕಳು ಹಾಗೂ ಮಹಿಳೆಯರೊಂದಿಗೆ ಬೆರೆತು ಆಟವಾಡಿ ನಲಿದು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿಕೊಟ್ಟಿರುತ್ತಾರೆ. ಹಾಗೂ ಇಲ್ಲಿ ಮಹಿಳೆಯರೇ ತಯಾರಿಸುವ ಬೇಕರಿ ಉತ್ಪನ್ನಗಳು ಹಪ್ಪಳ, ಕರಕುಶಲ ವಸ್ತುಗಳು, ಕ್ಯಾಂಡಲ್ ತಯಾರಿಕೆ, ಸಿ.ಡಿ.ಗಳ ಮೇಲೆ ಕರಕುಶಲತೆ ಗೃಹ ಕೈಗಾರಿಕೆಯ ಬಗ್ಗೆ ಮಾಹಿತಿ ಪಡೆದು ಗೈಡ್ಸ್‌ಗಳು ಇಲ್ಲಿನ ಮಹಿಳೆಯರಿಗೆ ಹಾಗೂ ಮಕ್ಕಳಿಗೆ ಹೊಸ ಉಡುಪುಗಳನ್ನು ನೀಡಿ ಸಂತೋಷ ಪಡಿಸಿದರು. ಹಾಗೂ ಎಲ್ಲರಿಗೂ ಒಳ್ಳೆಯ ಆರೋಗ್ಯ ನೀಡಲೆಂದು ಭಗವಂತನನ್ನು ಪ್ರಾರ್ಥಿಸಿದರು.

## ಬೆಳಗಾಂ ಜಿಲ್ಲೆ

ದಿನಾಂಕ : 21-01-2008 ರಿಂದ 25-01-2008ರ ವರೆಗೆ ರಾಷ್ಟ್ರ ಮಟ್ಟದ ಸ್ಕೌಟ್ಸ್, ಗೈಡ್ಸ್‌ಗಳ ಪ್ರಗತಿ ಪರಿಶೀಲನಾ ಶಿಬಿರವು ಆಂಧ್ರಪ್ರದೇಶದ ರಾಜ್ಯ ತರಬೇತಿ ಕೇಂದ್ರ ಜೇಡಿಮಟ್ಲ - ಸಿಕಂದರಾಬಾದ್‌ನಲ್ಲಿ ನಡೆದಿದ್ದು ಈ ಶಿಬಿರದಲ್ಲಿ ಕರ್ನಾಟಕ ರಾಜ್ಯದ ಸ್ಕೌಟ್ ಪ್ರತಿನಿಧಿಗಳಾಗಿ ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಸುರೇಬಾನದ ಶ್ರೀ ಫಲಾಹಾರ ಶಿವಯೋಗಿಶ್ವರ ಸಂಯುಕ್ತ ಪದವಿಪೂರ್ವ ಮಹಾ ವಿದ್ಯಾಲಯದ ಶ್ರೀ ವೈ.ವಿ. ಗೊರವನಕೊಳ್ಳ, ಸ್ಕೌಟ್ ಮಾಸ್ಟರ್ ಹಾಗೂ ಸ್ಕೌಟ್‌ಗಳು ಸಕ್ರಿಯವಾಗಿ ಭಾಗವಹಿಸಿ, ಪ್ರಥಮ ಸ್ಥಾನವನ್ನು ಪಡೆದುಕೊಂಡು ಕರ್ನಾಟಕದ ಹೆಸರನ್ನು ರಾಷ್ಟ್ರ ಮಟ್ಟದಲ್ಲಿ ಎತ್ತಿ ಹಿಡಿದಿದ್ದಾರೆ.



**ಸೌಂದತ್ತಿ** - ದಿನಾಂಕ 06-02-2008 ರಂದು ಕ್ಷೇತ್ರ ಶಿಕ್ಷಣಾಧಿಕಾರಿಗಳ ಸಭಾ ಭವನದಲ್ಲಿ ಸೌಂದತ್ತಿ ತಾಲ್ಲೂಕು ಮಟ್ಟದ ಸ್ಕೌಟರ್ಸ್ - ಗೈಡರ್ಸ್ ಸಮಾವೇಶ ಜರುಗಿತು. ಶ್ರೀ ಎಸ್.ಸಿ. ಕರಿಕಟ್ಟಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಸೌಂದತ್ತಿ ಇವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಜಗದೀಶ ಹಂಪನ್ನವರ, ಶ್ರೀ ಗುಗ್ಗರಿ, ಶ್ರೀ ಸಿಂಧೆ, ಶ್ರೀ ಗಿಡಮಲ್ಲಣ್ಣವರು, ಶ್ರೀ ಹಿರೇಮಠ, ಶ್ರೀ ಶಿವಾಪೂರ ಇವರು ಉಪಸ್ಥತರಿದ್ದರು. 62 ಶಿಕ್ಷಕರು ಭಾಗವಹಿಸಿದ್ದರು.

**ಹುಕ್ಕೇರಿ** - ದಿನಾಂಕ 06-02-2008 ರಂದು ಎಸ್.ಕೆ. ಪದವಿಪೂರ್ವ ಕಾಲೇಜ್ ಸಭಾ ಭವನದಲ್ಲಿ ಹುಕ್ಕೇರಿ ತಾಲ್ಲೂಕು ಮಟ್ಟದ ಸ್ಕೌಟರ್ಸ್ - ಗೈಡರ್ಸ್ ಸಮಾವೇಶ ಜರುಗಿತು. ಶ್ರೀ ಬಿ.ವೈ. ನಾಯಕ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹುಕ್ಕೇರಿ ಇವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ನಾಯ್ಕರ್, ಶ್ರೀ ಗುಡಸೆ ಹಾಗೂ ಶಿಕ್ಷಕ ಸಂಯೋಜಕರು ಉಪಸ್ಥಿತರಿದ್ದರು. ಒಟ್ಟು 120 ಶಿಕ್ಷಕರು ಭಾಗವಹಿಸಿದ್ದರು.

**ಅಥಣಿ** - ದಿನಾಂಕ 18-02-2008 ರಂದು ಕೆ.ಬಿ.ಎಸ್. ನಂ.-3 ಅಥಣಿ ಇಲ್ಲಿ, ಅಥಣಿ ವಲಯದ ಸ್ಕೌಟರ್ಸ್ ಗೈಡರ್ಸ್ ಸಮಾವೇಶ ಜರುಗಿತು. 64 ಶಿಕ್ಷಕರು ಭಾಗವಹಿಸಿದ್ದರು. ಶ್ರೀ ಜಿ.ಬಿ. ಮಣ್ಣಿಕೇರಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಅಥಣಿ ಇವರು ಅಧ್ಯಕ್ಷತೆ ವಹಿಸಿದ್ದರು.

ಶ್ರೀ ಹೂಟಿ, ಶ್ರೀ ವಾಲಿ, ಶ್ರೀ ದೇವರೆಡ್ಡಿ, ಶ್ರೀ ಗುದಗಾಪೂರ, ಶ್ರೀ ನಿಡೋಣಿ, ಶ್ರೀ ಹುಡೇದ, ಶ್ರೀ ಶಿವಾಪೂರ ಉಪಸ್ಥಿತರಿದ್ದರು.

**ನಿಪ್ಪಾಣಿ** - ದಿನಾಂಕ 19-02-2008 ರಂದು ಕೆ.ಎಲ್.ಈ. ಶಿಕ್ಷಣ ಸಂಸ್ಥೆಯ ಸಭಾ ಭವನ ನಿಪ್ಪಾಣಿ ಇಲ್ಲಿ ನಿಪ್ಪಾಣಿ ವಲಯದ ಸ್ಕೌಟರ್ಸ್ - ಗೈಡರ್ಸ್ ಸಮಾವೇಶ ಶ್ರೀ ಆರ್.ಎ. ತಳವಾರ ಕ್ಷೇತ್ರ ಶಿಕ್ಷಣಾಧಿಕಾರಿಗಳು, ನಿಪ್ಪಾಣಿ ಇವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ಬುದ್ಧನ್ನವರ, ಶ್ರೀ ಬಡಿಗೇರ, ಶ್ರೀ ನಾಯ್ಕರ್, ಶ್ರೀ ಶಿವಾಪೂರ್ ಉಪಸ್ಥಿತರಿದ್ದರು,.ಒಟ್ಟು 62 ಶಿಕ್ಷಕರು ಭಾಗವಹಿಸಿದ್ದರು.

**ಗೋಕಾಕ** - ದಿನಾಂಕ 26-02-2008 ರಂದು ಕ್ಷೇತ್ರ ಶಿಕ್ಷಣಾಧಿಕಾರಿಗಳ ಸಭಾ ಭವನ ಗೋಕಾಕ ಇಲ್ಲಿ ಗೋಕಾಕ ವಲಯದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶ ಜರುಗಿತು. 25 ಶಿಕ್ಷಕರು ಭಾಗವಹಿಸಿದ್ದರು. ಶ್ರೀ ಎಂ.ವೈ. ಹೊನ್ನಕಸ್ತೂರಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಗೋಕಾಕ್ ಇವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಸಾತಪುತೆ, ಶ್ರೀ ಕಾಕಡೆ, ಶ್ರೀ ಪಟಗುಂದಿ, ಕುಮಾರಿ. ಮಂಗಿ, ಶ್ರೀ ಶಿವಾಪೂರ, ಶ್ರೀ ತಹಸೀಲ್ದಾರ, ಶ್ರೀ ಗಾಣಿಗೇರ ಉಪಸ್ಥಿತರಿದ್ದರು.

**ರಾಯಬಾಗ** - ದಿನಾಂಕ 28-02-2008 ರಂದು ರಾಯಬಾಗ್ ಕ್ಷೇತ್ರ ಶಿಕ್ಷಣಾಧಿಕಾರಿಗಳ ಸಭಾಭವನದಲ್ಲಿ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶ ಜರುಗಿತು. ಶ್ರೀ ಜೋಡಗೇರಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ರಾಯಬಾಗ ಇವರು ಅಧ್ಯಕ್ಷತೆ ವಹಿಸಿದ್ದರು. ಒಟ್ಟು 25 ಶಿಕ್ಷಕರು ಭಾಗವಹಿಸಿದ್ದರು. ಶ್ರೀ ದಿಗ್ರಜ್, ಶ್ರೀ ಆನೆಸೂರ, ಶ್ರೀ ತುರಮುಂದಿ, ಶ್ರೀ ಮಠಪತಿ, ಶ್ರೀ ಶಿವಾಪೂರ ಉಪಸ್ಥಿತರಿದ್ದರು.



## ಚಾಮರಾಜನಗರ ಜಿಲ್ಲೆ

ದಿನಾಂಕ : 13-02-2008 ರಂದು ವಿಶ್ವ ಸ್ಕೌಟ್ ಶತಮಾನೋತ್ಸವದ ಅಂಗವಾಗಿ ಜಿಲ್ಲಾ ಮಟ್ಟದ ದಂತ ಆರೋಗ್ಯ ತಪಾಸಣೆ ಶಿಬಿರವನ್ನು ಚಾಮರಾಜನಗರ ಸಂತ ಜೋಸೆಫ್ ಶಾಲೆಯಲ್ಲಿ ಏರ್ಪಡಿಸಲಾಯಿತು. ಸೋ।। ಹೆಚ್.ಎಂ. ಉತ್ತರಿಕಾ ಮೇರಿರವರಿಂದ ಉದ್ಘಾಟಿಸಲ್ಪಟ್ಟಿತು. ಡಾ।। ಅನಿಲ್ ಕುಮಾರ್ ಡಾ।। ತಾರಾರವರು ತಪಾಸಣೆ ಮಾಡಿದರು. ಕಾರ್ಯಕ್ರಮದಲ್ಲಿ ಶ್ರೀ ಜಿ.ಆರ್. ಅಶ್ವಥನಾರಾಯಣ, ಡಿ.ಸಿ(ಜಿ), ಪ್ರೇಮಾ ಶಿವಸ್ವಾಮಿ, ಶ್ರೀ ಡಿ.ಎಸ್. ಭೋಗನಂಜಪ್ಪ, ಎ.ಎಸ್.ಓ.ಸಿ. ಶ್ರೀಮತಿ ಭಾರತಿ ಡಾಯಸ್, ಶ್ರೀ ವೆಂಕಟ ನಾಗಪ್ಪ ಶೆಟ್ಟಿ, ಫ್ಲೋರಿನಾ, ಶ್ರೀ ರೇಚಣ್ಣಾ ಉಪಸ್ಥಿತರಿದ್ದರು.

ದಿನಾಂಕ 14-02-2008 ರಂದು ಪೇಟೆ ಹೆಚ್.ಪಿ.ಎಸ್. ನಲ್ಲಿ ಸಾಮಾನ್ಯ ಆರೋಗ್ಯ ತಪಾಸಣಾ ಶಿಬಿರವನ್ನು ಶ್ರೀಮತಿ ಪ್ರೇಮಾ ಶಿವಸ್ವಾಮಿ ಡಿ.ಸಿ.(ಜಿ) ಯವರು ಉದ್ಘಾಟಿಸಿದರು. ಡಾ।। ನಂಜಪ್ಪ ಹಾಗೂ ಡಾ।। ನಾಗಾರ್ಜುನ ಇವರು ಸ್ಕೌಟ್ಸ್ ಗೈಡ್ಸ್‌ಗಳ ಸಹಕಾರದಿಂದ ತಪಾಸಣೆ ನಡೆಸಿದರು.

## ದಕ್ಷಿಣಕನ್ನಡ ಜಿಲ್ಲೆ

ದಿನಾಂಕ : 22-02-2008 ರಿಂದ 23-02-2008ರ ವರೆಗೆ ಜಿಲ್ಲಾ ಸಂಸ್ಥೆಯು ಹಮ್ಮಿಕೊಂಡಿರುವ 2006-2007ನೇ ಸಾಲಿನ ತೃತಿಯ ಸೋಪಾನ ಪರೀಕ್ಷೆಯು ದಕ್ಷಿಣಕನ್ನಡ ಜಿಲ್ಲಾ ಪಂಚಾಯತ್ ಹಿರಿಯ ಪ್ರಾಥಮಿ ಶಾಲೆ ಉಪ್ಪಿನಂಗಡಿ ಇಲ್ಲಿ ನಡೆಯಿತು. ಇದರ ಉಸ್ತುವಾರಿಯನ್ನು ಶ್ರೀ ಐತ್ತಪ್ಪ ನಾಯ್ಕ ಮುಖ್ಯೋಪಾಧ್ಯಾಯ ಇವರು ವಹಿಸಿ ಆಗಮಿಸಿದ್ದ ಸ್ಕೌಟರ್ ಗೈಡರ್‌ಗಳಿಗೆ ಸಹಕರಿಸಿದರು.

ಜಿಲ್ಲಾ ಸಂಸ್ಥೆಯು ಹಮ್ಮಿಕೊಂಡಿರುವ 2006-2007ನೇ ಸಾಲಿನ ತೃತೀಯ ಚರಣ ಮತ್ತು ಹಿರೇಕ್ ಪಂಕ್ ಪರೀಕ್ಷೆಯು ದಿನಾಂಕ 22-03-2008 ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ಹಿರಿಯ ಪ್ರಾಥಮಿಕ ಶಾಲೆ ಉಪ್ಪಿನಂಗಡಿ ಇಲ್ಲಿ ನಡೆಯಿತು. ಇದರ ನಾಯಕತ್ವವನ್ನು, ಶ್ರೀಮತಿ ರವಿಕಲ ಎಚ್.ಡಬ್ಲ್ಯೂ.ಬಿ (ಕ) ವಹಿಸಿದ್ದರು.

ದಿನಾಂಕ 22-02-2008ರಂದು ಚಿಂತನಾ ದಿನಾಚರಣೆಯನ್ನು ಸರ್ವಧರ್ಮ ಪ್ರಾರ್ಥನೆ ಮಾಡುವ ಮೂಲಕ ಆಚರಿಸಲಾಯಿತು.

ಜಿಲ್ಲಾ ಸಂಸ್ಥೆಯು ಹಮ್ಮಿಕೊಂಡಿರುವ 2006-2007ನೇ ಸಾಲಿನ ತೃತೀಯ ಚರಣ ಮತ್ತು ಹಿರೇಕ್ ಪಂಕ್ ಪರೀಕ್ಷೆಯು ದಿನಾಂಕ 23-02-2008 ರಂದು ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಭವನ ಲಾಲ್‌ಭಾಗ್‌ನಲ್ಲಿ ನಡೆಯಿತು. ಇದರ ಉಸ್ತುವರಿಯನ್ನು ಶ್ರೀಮತಿ ಸಂಧ್ಯಾ ಎಚ್.ಡಬ್ಲ್ಯೂ.ಬಿ. (ಕ) ವಹಿಸಿದ್ದರು.

## ಚಿಕ್ಕಮಗಳೂರು ಜಿಲ್ಲೆ

ದಿನಾಂಕ 12-02-2008 ರಂದು ಕೆ.ಆರ್. ಪೇಟೆ, ಎಂ.ಇ.ಎಸ್. ಪ್ರೌಢ ಶಾಲೆಯಲ್ಲಿ ವಿಶ್ವ ಸ್ಕೌಟ್ ಶತಮಾನೋತ್ಸವವನ್ನು, ದಾನಿಗಳು ಹಾಗು ನಿವೃತ್ತ ಶಿಕ್ಷಕರು ಆದ ಶ್ರೀಮಾನ್ ಬಿ.ಸಿ. ರಾಮೇಗೌಡ ಇವರ ಅಧ್ಯಕ್ಷತೆಯಲ್ಲಿ ಆಚರಿಸಲಾಯಿತು.

ಶ್ರೀ ನೀಲಕಂಠಾಚಾರ್ಯ, ಕಾರ್ಯದರ್ಶಿ, ಸ್ಥಳೀಯ ಸಂಸ್ಥೆ, ಚಿಕ್ಕಮಗಳೂರು ಇವರು ಸಮಾರಂಭವನ್ನು ಉದ್ಘಾಟಿಸಿ, ಸ್ಕೌಟ್ ಇತಿಹಾಸದ ಬಗ್ಗೆ ಮಾಹಿತಿ ನೀಡಿದರು.

ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಶ್ರೀ ಮಹೇಶ್ವರಪ್ಪ ಅವರು ಶಾಲೆಯ ಬಗ್ಗೆ ಮೆಚ್ಚುಗೆ ಸೂಚಿಸುತ್ತ ಗ್ರಾಮಾಂತರ ಸ್ಕೌಟ್ಸ್ ಬೆಳವಣಿಗೆ ಬಗ್ಗೆ ಕಾನೂನಿನನ್ವಯ ದೊರೆಯಬಹುದಾದ ಧನ ಸಹಾಯವನ್ನು ಪಂಚಾಯಿತಿ ವತಿಯಿಂದ ಕೊಡಿಸುವುದಾಗಿ ತಿಳಿಸಿದರು.

ಡಿ.ಓ.ಸಿ. ಶ್ರೀ ಹೊನ್ನೇಗೌಡ ಅವರು ಸ್ಕೌಟಿಂಗ್‌ನಿಂದ ಮಕ್ಕಳಿಗಾಗುವ ಅನುಕೂಲತೆಗಳು ಮತ್ತು ಸೌಲಭ್ಯಗಳ ಬಗ್ಗೆ ವಿವರಣೆ ನೀಢಿದರು.

ಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ರಾಮಸ್ವಾಮಿಯವರು ಉಪಸ್ಥಿತರಿದ್ದರು. ಸ್ಕೌಟ್ ಮಾಸ್ಟರ್ ಗಂಗಾಧರ ಆರಾಧ್ಯ ಅವರು ಸ್ವಾಗತಿಸಿ ವಂದಿಸಿದರು.

## ರಾಯಚೂರು ಜಿಲ್ಲೆ

**ಸ್ಕೌಟ್ಸ್-ಗೈಡ್ಸ್ ತರಬೇತಿ ಶಿಬಿರ ಉದ್ಘಾಟನೆ -** ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ, ಜಿಲ್ಲಾ ಸಂಸ್ಥೆ ರಾಯಚೂರು ಇವರುಗಳ ಸಂಯುಕ್ತ ಆಶ್ರಯದಲ್ಲಿ ಸ್ಕೌಟ್ ಮಾಸ್ಟರ್, ಕಬ್ ಮಾಸ್ಟರ್, ಗೈಡ್ ಕ್ಯಾಪ್ಟನ್, ಫ್ಲಾಕ್ ಲೀಡರ್‌ಗಳ ಮೂಲ ಮತ್ತು ಮುಂದುವರೆದ ತರಬೇತಿ ಶಿಬಿರದ ಉದ್ಘಾಟನೆಯನ್ನು ಶ್ರೀ ಮುನಿಯಪ್ಪ ಮುದ್ದಪ್ಪ ಮಾಜಿ ಸಚಿವರು ದೀಪ ಬೆಳಗಿಸುವುದರ ಮೂಲಕ ನೆರವೇರಿಸಿದರು. ಮಾಜಿ ಸಚಿವರಾದ ಸುರೇಂದ್ರ ರಾವ್ ಕಸ್ಬೆ ಉಪಸ್ಥಿತರಿದ್ದರು. ಸ್ವಾಗತ ಮತ್ತು ಪ್ರಾಸ್ತಾವಿಕವಾಗಿ ಡಾ|| ಆರ್. ನರಸಿಂಹಮೂರ್ತಿ ಮಾತನಾಡಿದರು. ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಖಾಜಾಹುಸೇನ ಆನಾಹೊಸೂರ, ಜಿಲ್ಲಾ ಸಂಘಟನಾ ಆಯುಕ್ತರು ಕಾರ್ಯಕ್ರಮ ನಿರೂಪಿಸಿದರು. ಶ್ರೀಮತಿ ಅಜೀಜಾ ಸುಲ್ತಾನ್, ಜಿಲ್ಲಾ ಆಯುಕ್ತರು, ಗೈಡ್ಸ್ ಇವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯಗೊಂಡಿತು. ಮುಕ್ತಾಯ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಮಾನ್ಯ ಶಾಸಕ ಶ್ರೀ ಎನ್.ಎಸ್. ಬೋಸರಾಜ ಉಪಸ್ಥಿತರಿದ್ದರು.



ರಾಜ್ಯ ಕೇಂದ್ರ ಕಛೇರಿಯ ಆವರಣದಲ್ಲಿ ನಡೆದ ಗಣರಾಜ್ಯೋತ್ಸವ ದಿನಾಚರಣೆಯಂದು ಸ್ಕೌಟ್ ಮಾತನಾಡುತ್ತಿರುವುದು. ವೇದಿಕೆಯಲ್ಲಿ ಶ್ರೀ ಕೆ.ವಿ. ಕೃಷ್ಣಸ್ವಾಮಿರಾವ್, ಶ್ರೀಮತಿ ಮನೋಹರ, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಎನ್. ಶ್ರೀನಿವಾಸನ್, ಜಂಟಿ ರಾಜ್ಯ ಕಾರ್ಯದರ್ಶಿ, ಶ್ರೀ ಎಂ.ಎಸ್. ನಟರಾಜ್ ಹಾಗೂ ಇತರರನ್ನು ಕಾಣಬಹುದು.



ರಾಜ್ಯ ಕೇಂದ್ರ ಕಛೇರಿಯ ಆವರಣದಲ್ಲಿ ನಡೆದ ಗಣರಾಜ್ಯೋತ್ಸವ ದಿನಾಚರಣೆ ಸಂದರ್ಭದ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳು.



ಗದಗ ಜಿಲ್ಲೆ ವಿಶ್ವ ಸ್ಕೌಟ್ ಶತಮಾನೋತ್ಸವವನ್ನು ಜಿಲ್ಲಾಧಿಕಾರಿಗಳಾದ ಶ್ರೀ ಎನ್. ಶ್ರೀರಾಮನ್‌ನವರು ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕರಾದ ಶ್ರೀ ಎನ್. ಎಚ್. ಕಟಕದೊಂಡ ಉದ್ಘಾಟಿಸಿದರು. ಚಿತ್ರದಲ್ಲಿ ಶ್ರೀ ವಿ.ಬಿ. ಪೋಲಿಸ್ ಪಾಟೀಲ್, ಗ್ರಾಮದ ಕಾರ್ಯದರ್ಶಿ ಮತ್ತು ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು.



ಉಡುಪಿ ಜಿಲ್ಲಾ ಸಂಸ್ಥೆ ಮಣಿಪಾಲದಲ್ಲಿ ದಿನಾಂಕ 22.02.2008ರಂದು ಏರ್ಪಡಿಸಿದ್ದ ಸ್ಥಾಪಕರ- ಚಿಂತನಾ ದಿನಾಚರಣೆ ಹಾಗೂ ಕಬ್-ಬುಲ್‌ಬುಲ್ಸ್ ಉತ್ಸವವನ್ನು ತರಂಗ ವಾರಪತ್ರಿಕೆ ವ್ಯವಸ್ಥಾಪಕ ಸಂಪಾದಕರಾದ ಶ್ರೀಮತಿ ಸಂಧ್ಯಾ ಎಸ್. ಪೈ ಉದ್ಘಾಟಿಸಿ ಚಳವಳಿಗೆ ಶುಭ ಹಾರೈಸಿದರು. ಡಾ॥ ಎಚ್.ಜೆ. ಗೌರಿ, ಶ್ರೀ ಪಿ. ರಬೀಂದ್ರ ನಾಯಕ್, ಶ್ರೀ ಕೆ.ಬಿ. ರಾವ್, ಶ್ರೀ ಎಡ್ವಿನ್ ಆಳ್ವ, ಶ್ರೀ ಲಿಂಗರಾಜು, ಶ್ರೀಮತಿ ರಾಜಲಕ್ಷ್ಮಿ ಶೆಟ್ಟಿ, ಶ್ರೀ ಅನಂತರಾಮ, ಉಪಾಧ್ಯಾಯ ಚಿತ್ರದಲ್ಲಿದ್ದಾರೆ.



ಇತ್ತೀಚೆಗೆ ರಾಯಚೂರಿನಲ್ಲಿ ನಡೆದ ದಳನಾಯಕರ ತರಬೇತಿ ಶಿಬಿರಗಳ ಉದ್ಘಾಟನೆಯನ್ನು ಮಾಜಿ ಸಚಿವರಾದ ಶ್ರೀ ಮುನಿಯಪ್ಪ ಮುದ್ದಪ್ಪ ನೇರವೇರಿಸಿದರು. ಈ ಸಂದರ್ಭದಲ್ಲಿ ಮಾಜಿ ಸಚಿವರಾದ ಶ್ರೀ ಸುರೇಂದ್ರರಾವ್ ಕಸ್ಬೆ, ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ. ತಿಮ್ಮಯ್ಯ ಹಾಗೂ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.



ಗಣರಾಜ್ಯೋತ್ಸವ ದಿನದಂದು ಮಂಡ್ಯದ ಶ್ರೀ ಲಕ್ಷ್ಮೀ ಜನಾರ್ಧನ ಪ್ರೌಢಶಾಲೆಯ ಗೈಡ್ಸ್‌ಗಳು ಪಥಚಲನೆಯಲ್ಲಿ ದ್ವಿತೀಯ ಸ್ಥಾನಪಡೆದು ಹೆಚ್ಚುವರಿ ಉಪಪೋಲಿಸ್ ಅಧೀಕ್ಷಕರಾದ ಶ್ರೀ ಕೃಷ್ಣರಂಗನ್‌ರವರಿಂದ ಬಹುಮಾನ ಸ್ವೀಕರಿಸುತ್ತಿರುವುದು.

# ವಿವಿಧ ಜಿಲ್ಲೆಗಳಲ್ಲಿ ಆಚರಿಸಿದ ಸ್ಥಾಪಕ


ರಾಯಚೂರು ಜಿಲ್ಲೆ


ಚಾಮರಾಜನಗರ ಜಿಲ್ಲೆ


ಉಡುಪಿ ಜಿಲ್ಲೆ



ಬೆಳಗಾವಿ ಜಿಲ್ಲೆ


ಚಿಕ್ಕೋಡಿ(ಬೆಳಗಾವಿ ಜಿಲ್ಲೆ)



ಧಾರವಾಡ ಜಿಲ್ಲೆ


ಚಿತ್ರದುರ್ಗ ಜಿಲ್ಲೆ


ಕೋಲಾರ ದಕ್ಷಿಣ ಜಿಲ್ಲೆ

# ...ನಾಚರಣೆಯ ವಿಹಂಗಮ ನೋಟ


ಹಾಸನ ಜಿಲ್ಲೆ


ಕೊಪ್ಪಳ ಜಿಲ್ಲೆ


ಹೊನ್ನಾವರ(ಉತ್ತರ ಕನ್ನಡ ಜಿಲ್ಲೆ)


ಗದಗ ಜಿಲ್ಲೆ


ಚಿಕ್ಕಮಗಳೂರು ಜಿಲ್ಲೆ


ಶಿರಾ(ತುಮಕೂರು ಜಿಲ್ಲೆ)


ಮಂಡ್ಯ ಜಿಲ್ಲೆ


ಜಾಲಿಕಟ್ಟೆ(ಬಾಗಲಕೋಟೆ ಜಿಲ್ಲೆ)



Sri T.S. Lucas, ASC(S), Shakinghand with Sri M.M. BEBARIA, Chief Manager-Security Fire, HAL after presenting Membership Badge. Sri M.K. Khan, DCC, Bangalore South and Sri P. Nandakumar, RSL, HAL Rover Crew



ಆಂಧ್ರಪ್ರದೇಶದ ಸಿಕಂದರಾಬಾದ್‌ನಲ್ಲಿ ನಡೆದ ವಿಭಾಗೀಯ ಮಟ್ಟದ ಸ್ಕೌಟ್ಸ್-ಗೈಡ್ಸ್‌ಗಳ ಪ್ರಗತಿ ಪರಿಶೀಲನಾ ಶಿಬಿರದಲ್ಲಿ ಕರ್ನಾಟಕದ ಪ್ರತಿನಿಧಿಗಳಾಗಿ ಶ್ರೀ ಫಲಹಾರ ಶಿವಯೋಗೀಶ್ವರ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯ ಸುರೇಬಾನ್, ಬೆಳಗಾವಿ ಜಿಲ್ಲೆ ಸ್ಕೌಟ್‌ಗಳು ಭಾಗವಹಿಸಿ ಪ್ರಥಮ ಸ್ಥಾನಗಳಿಸಿದರು.



ದಿ 1-03-2008ರಂದು ಬೆಂಗಳೂರು ಉತ್ತರ ಜಿಲ್ಲೆ, ಮಲ್ಲೇಶ್ವರಂ, ನಿರ್ಮಲರಾಣಿ ಇಂಗ್ಲೀಷ ಪ್ರೈಮರಿ ಶಾಲೆಯ ಗೈಡ್ಸ್‌ಗಳು ಕೇಂದ್ರ ಕಾರಾಗೃಹ, ಪರಪ್ಪನ ಅಗ್ರಹಾರ, ಮಹಿಳಾ ವಿಭಾಗ, ಬೆಂಗಳೂರು ಇಲ್ಲಿಗೆ ಭೇಟಿ ನೀಡಿ ಮಹಿಳಾ ಬಂಧಿಗಳೊಂದಿಗೆ ವಿಚಾರ ವಿನಿಮಯ ಮಾಡುಕೊಂಡು ಸಾಂಸ್ಕೃತಿಕ ಕಾರ್ಯಕ್ರಮ ನಡೆಸಿಕೊಟ್ಟರು.



ಚಿಕ್ಕಮಗಳೂರಿನ ಎಂ.ಇ.ಎಸ್. ಪ್ರೌಢಶಾಲೆಯಲ್ಲಿ ವಿಶ್ವ ಸ್ಕೌಟ್ ಶತಮಾನೋತ್ಸವವನ್ನು ದಿನಾಂಕ 12-02-2008ರಂದು ದಾನಿಗಳು ಹಾಗೂ ನಿವೃತ್ತ ಶಿಕ್ಷಕರು ಶ್ರೀ ಬಿ.ಸಿ. ರಾಮೇಗೌಡ ಇವರ ಅಧ್ಯಕ್ಷತೆಯಲ್ಲಿ ಆಚರಿಸಲಾಯಿತು. ಸಮಾರಂಭದಲ್ಲಿ ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಉಪಸ್ಥಿತರಿದ್ದರು.



ಪಯೋನರಿಂಗ್ ಪ್ರಾಜೆಕ್ಟನ್ನು ವಿಕ್ಷೀಸುತ್ತಿರುವ ಗುಲ್ಬರ್ಗ ಜಿಲ್ಲೆಯ ಸ್ಕೌಟ್ಸ್ - ಗೈಡ್ಸ್ ಹಾಗೂ ರೇಂಜರ್‌ಗಳು.



ದಿ 14-02-2008ರಂದು ಚಾಮರಾಜನಗರದಲ್ಲಿ ನಡೆದ ಜಿಲ್ಲಾ ಮಟ್ಟದ ಆರೋಗ್ಯ ತಪಾಸಣಾ ಶಿಬಿರದಲ್ಲಿ ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಹಾಗೂ ಸ್ಕೌಟ್ಸ್-ಗೈಡ್ಸ್‌ಗಳು.

ಇನ್ನೋರ್ವ ಅತಿಥಿ ಶ್ರೀ ಎ. ಪಾಪರೆಡ್ಡಿ ತಮ್ಮ ವಿದ್ಯಾರ್ಥಿ ಜೀವನದಲ್ಲಿಯ ಸ್ಕೌಟ್ ಮಾಸ್ಟರರ ಸೇವೆಯನ್ನು ನೆನೆಸಿದರು. ಆರೋಗ್ಯ ಶಿಕ್ಷಣ ಸ್ಥಾಯಿ ಸಮಿತಿಯ ಅಧ್ಯಕ್ಷ ಶ್ರೀ ಪ್ರಾಕಾಶ ಚೇಗರಕಲ್ ಸ್ಕೌಟ್ ಬೆಳವಣಿಗೆಗೆ ತಮ್ಮಿಂದ ಎಲ್ಲಾ ಸಹಾಯ, ಸಹಕಾರ ನೀಡುವಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡುವುದಾಗಿ ತಿಳಿಸಿದರು. ಕ್ಷೇತ್ರ ಶಿಕ್ಷಣಾಧಿಕಾರಿ ಇಂದಿರಾರವರು ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ಸ್ಕೌಟ್ಸ್ ಗೈಡ್ಸ್ ಬೆಳೆಯಬೇಕು ಎಂದರು.

ಶ್ರೀ ಕೆ. ತಿಮ್ಮಯ್ಯ ಡಿ.ಸಿ.ಸಿ., ನಗರ ಸಭೆ ಸದಸ್ಯ ಶ್ರೀ ಮಲ್ಲೇಶಪ್ಪನ ಸ.ಸ. ಆಯಾಳಿಪ್ಪ ಉಪಸ್ಥಿತರಿದ್ದರು.

## ಉತ್ತರ ಕನ್ನಡ ಜಿಲ್ಲೆ

ದಿನಾಂಕ : 14-02-2008 ರಂದು ಹೊನ್ನಾವರದ ರೋಸರಿ ಶಾಲೆಯ 100ಕ್ಕೂ ಹೆಚ್ಚು ಸ್ಕೌಟ್ಸ್ ಹಾಗೂ ಗೈಡ್ಸ್‌ಗಳು ಹೊನ್ನಾವರದ ಪ್ರೇಕ್ಷಣೀಯ ಸ್ಥಳವಾದ "ಅಪ್ಸರಕೊಂಡ" ಕ್ಕೆ ಹೊರ ಸಂಚಾರ ಕೈಗೊಂಡಿದ್ದರು. ಧ್ವಜ ವಂದನೆ, ಸ್ಕೌಟಿಂಗ್ ಹಾಗೂ ಗೈಡಿಂಗ್‌ನ ಇತಿಹಾಸ, ಸೆಲ್ಯೂಟ್, ಧ್ವಜ ಗೀತೆ ಪ್ರಾರ್ಥನೆ ಗೀತೆಗಳನ್ನೂ ಹಾಗೂ ಅದರ ಮಹತ್ವವನ್ನು ತಿಳಿಸಿ ಹೇಳಲಾಯಿತು. ಇದರೊಂದಿಗೆ ಮನರಂಜನಾ ಚಟುವಟಿಕೆಗಳು ನಡೆದವು. ಮತ್ತು ಗಂಟುಗಳು, ಪ್ರಥಮ ಚಿಕಿತ್ಸೆ, ಹಾಗೂ ಶಿಬಿರೋಪಕರಣಗಳ ರಚನೆಗಳ ಬಗ್ಗೆ ಮಕ್ಕಳಿಗೆ ತಿಳಿಸಲಾಯಿತು. ತದನಂತರ ಅಪ್ಸರ ಕೊಂಡದ ಎತ್ತರದ ಗುಡ್ಡವನ್ನು ಹತ್ತಿಸಿ ಸಮುದ್ರ ತೀರವನ್ನು ಮುಟ್ಟುವಂತೆ ಮಾರ್ಗದರ್ಶನ ನೀಡಲಾಯಿತು. ಮಕ್ಕಳು ಸಂಜೆ ಸರಿಯಾಗಿ 5.30ಕ್ಕೆ ಸಮುದ್ರದ ತೀರವನ್ನು ಮುಟ್ಟಿ, ಸೂರ್ಯಾಸ್ತದ ಸುಂದರ ನೋಟವನ್ನು ವೀಕ್ಷಿಸಿ, ಪುನಃ ಶಿಬಿರ ಸ್ಥಳಕ್ಕೆ ಬಂದು ಧ್ವಜ ಅವರೋಹಣ ಮಾಡಿ ಖುಷಿಯಿಂದ ಹಿಂದಿರುಗಿದರು.



ದಿನಾಂಕ 16.02.2008 ರಂದು ಮಾರ್ಥೋಮಾ ಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಅಡುಗೆ ಮಾಡುವ ಕಾರ್ಯಕ್ರಮ ಏರ್ಪಡಿಸಿದ್ದರು. ಸ್ಕೌಟ್ ಮಾಸ್ಟರ್ ಶ್ರೀ ಬಿ.ಡಿ. ಫರ್ನಾಂಡೀಸ್‌ರವರ ನೇತೃತ್ವದಲ್ಲಿ ಈ ಕಾರ್ಯಕ್ರಮ ಜರುಗಿತು. ಶ್ರೀ ಎಸ್.ಎಂ. ಲೋಪಿಸ್, ಡಿ.ಓ.ಸಿ., ಶ್ರೀ ಸತ್ಯನಾರಾಯಣ ಹೆಗಡೆ, ಲೇಡಿ ಸ್ಕೌಟ್ ಮಾಸ್ಟರ್ ಮಿಸ್. ಪ್ರೀತಾರಾವ್ ಇವರು ಭೇಟಿ ನೀಡಿದ್ದರು. ಕೊನೆಯಲ್ಲಿ ಶಾಲೆಯ ಪ್ರಾಂಶುಪಾಲರಾದ ಫಾದರ್ ಥೋಮಸ್ ಮ್ಯಾಥ್ಯೂರವರು ಅತಿಥಿಗಳಾಗಿ ಬಂದಿದ್ದರು.

## ಕೊಪ್ಪಳ ಜಿಲ್ಲೆ

ಕೊಪ್ಪಳ ಜಿಲ್ಲಾ ಕುಷ್ಟಗಿ ತಾಲ್ಲೂಕು ಮಟ್ಟದ ಮಕ್ಕಳ ಮೇಳವನ್ನು ದಿನಾಂಕ 28-02-2008ರಂದು ಸ್ಥಳೀಯ ಬಾಲಕರ ಹಿರಿಯ ಪ್ರಾಥಮಿಕ ಶಾಲೆ ಕುಷ್ಟಗಿಯಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಉಮೇಶ ಪೂಜಾರ, ಬಿ.ಇ.ಓ., ಕುಷ್ಟಗಿ ನೆರವೇರಿಸಿದರು. ಜಿಲ್ಲಾ ಡಿ.ಓ.ಸಿ. ಶ್ರೀ ಯರ್ರಣ್ಣ ಹಾಗೂ ಪ್ರಾಸ್ತಾವಿಕವಾಗಿ ಎಲ್.ಎ. ಕಾರ್ಯದರ್ಶಿಯಾದ ಶ್ರೀ ದೊಡ್ಡನಗೌಡ ಗೌಡರ ಮಾತನಾಡಿದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಉರ್ದು ಪ್ರೌಢ ಶಾಲೆಯ ಮುಖ್ಯೋಪಾಧ್ಯಾಯಿನಿಯಾದ ಶ್ರೀಮತಿ ಸುಧಾ ಎನ್. ಉಮರ್ಜಿ ವಹಿಸಿಕೊಂಡಿದ್ದರು. ಸ್ಥಳೀಯ ಶಾಲೆಯ ಮುಖ್ಯ ಗುರುಗಳಾದ ಶ್ರೀ ಪುತ್ರಪ್ಪ, ಬಾಲಕಿಯರ ಹಿರಿಯ ಪ್ರಾಥಮಿಕ ಶಾಲೆ ಮುಖ್ಯೋಪಾಧ್ಯಾಯರಾದ ಶ್ರೀ ಸಿದ್ರಾಮಪ್ಪ, ವಿದ್ಯಾನಗರ ಶಾಲೆ ಮುಖ್ಯೋಪಾಧ್ಯಾಯರು ಶ್ರೀ ಶಿವಯ್ಯ, ಶ್ರೀ ಕೆ.ಎಸ್. ಅಥಣಿ ಸಿ.ಆರ್.ಸಿ., ಸಂ. ವ್ಯಕ್ತಿ ಕೊರಡಕೇರಾ ಸಿ.ಆರ್.ಸಿ. ಉಪಸ್ಥಿತರಿದ್ದರು.



# ಸ್ಥಾಪಕರ ದಿನಾಚರಣೆಯ ಜಿಲ್ಲಾ ವರದಿಗಳು



## ಧಾರವಾಡ ಜಿಲ್ಲೆ

ದಿನಾಂಕ : 22-02-2008 ರಂದು ನರಗುಂದ ನಗರದ ಸರಕಾರಿ ಹೆಣ್ಣು ಮಕ್ಕಳ ಪ್ರಾಥಮಿಕ ಶಾಲೆಯಲ್ಲಿ ಲಾರ್ಡ್ ಬೆಡೆನ್ ಪೊವೆಲ್ಲರ ಜನ್ಮದಿನಾಚರಣೆಯನ್ನು ಆಚರಿಸಲಾಯಿತು. ಸಮಾರಂಭದ ಅಧ್ಯಕ್ಷತೆಯನ್ನು ಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಹೆಚ್.ವೈ. ಹುನಗುಂಡಿ ಯವರು ವಹಿಸಿದ್ದರು. ಶ್ರೀ ಡಿ.ಹೆಚ್. ಅಜ್ಜಿ ಸದಸ್ಯರು ಸರಕಾರಿ ನೌಕರ ಸಂಘ ಇವರು ಮುಖ್ಯ ಅತಿಥಿಗಳಾಗಿ ಪಾಲ್ಗೊಂಡಿದ್ದರು. ಶಹರ ವಲಯದ ಸ್ಕೌಟ್ಸ್ ಗೈಡ್ಸ್ ಮತ್ತು ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿದ್ದರು.

ಶ್ರೀಮತಿ ಎನ್.ಎನ್. ಠಾಕೂರದಾಸ ಸ್ವಾಗತಿಸಿದರು. ನರಗುಂದ ತಾಲ್ಲೂಕಿನ ಕಾರ್ಯದರ್ಶಿಯಾದ ಶ್ರೀ ಎಸ್.ಐ. ಅಂಕಲಿ ಪ್ರಾಸ್ತಾವಿಕವಾಗಿ ಮಾತನಾಡಿದರು.

ಶ್ರೀ ಎಂ.ಎಸ್. ಕುಚಬಾಳ ಸ್ಕೌಟ್ ಮಾಸ್ಟರರು ಕಾರ್ಯಕ್ರಮ ನಿರೂಪಿಸಿದರು. ಶ್ರೀಮತಿ ಟಿ.ಬಿ. ಪಾಟೀಲ ಗೈಡ್ ಕ್ಯಾಪ್ಟನ್‌ರು ವಂದಿಸಿದರು.

## ಉತ್ತರ ಕನ್ನಡ ಜಿಲ್ಲೆ

ಕುಮುಟಾ ತಾಲ್ಲೂಕಿನ ಜನತಾ ವಿದ್ಯಾಲಯ ಧಾರೇಶ್ವರ ಹೈಸ್ಕೂಲಿನಲ್ಲಿ ಲಾರ್ಡ್ ಬೆಡೆನ್ ಪೊವೆಲ್ಲರ ಜನ್ಮ ದಿನಾಚರಣೆಯನ್ನು ಆಚರಿಸಲಾಯಿತು. ಈ ಸಭೆಗೆ ಅಧ್ಯಕ್ಷರಾಗಿ ಆಗಮಿಸಿದ ಶಾಲಾ ಮುಖ್ಯಾಧ್ಯಾಪಕರಾದ ಶ್ರೀ ಟಿ.ಡಿ. ಲಮಾಣಿಯುವರು ಬೆಡೆನ್ ಪೊವೆಲ್ಲರ ಭಾವಚಿತ್ರಕ್ಕೆ ದೀಪ ಬೆಳಗಿಸಿ ಬೇರೆ ಬೇರೆ ಹುತಾತ್ಮರ ಬಗ್ಗೆ ತಿಳಿಸಿದರು. ಮುಖ್ಯ ಅತಿಥಿಗಳಾಗಿ ಶಾಲಾ ಅಭಿವೃದ್ಧಿ ಕೋಶಾಧ್ಯಕ್ಷರಾದ ಶ್ರೀ ನಾಗರಾಜ ಎಂ. ಶೇಖರ್, ಜಿಲ್ಲಾ ಸ್ಕೌಟ್ಸ್ ತರಬೇತಿ ಆಯುಕ್ತರಾದ ಶ್ರೀ ಬಿ.ಡಿ. ಫರ್ನಾಂಡಿಸ್‌ರು ಉಪಸ್ಥಿತರಿದ್ದರು. ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಲೋಪೀಸ್‌ರವರು ಭಾಗವಹಿಸಿದ್ದರು.



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಉತ್ತರ ಕನ್ನಡ, ಜಿಲ್ಲಾ ಸಂಸ್ಥೆ ಮತ್ತು ಸ್ಥಳೀಯ ಸಂಸ್ಥೆ ಸಹಯೋಗದೊಂದಿಗೆ ಚಳುವಳಿಯ ಜನಕರಾದ ಲಾರ್ಡ್ ಬೆಡೆನ್ ಪೊವೆಲ್ ಅವರ 151ನೇ ಜನ್ಮ ದಿನಾಚರಣೆಯನ್ನು ಹೊನ್ನಾವರದ ಕಲಾ ಕೇಂದ್ರದಲ್ಲಿ ಬಹಳ ವಿಜೃಂಭಣೆಯಿಂದ ಆಚರಿಸಲಾಯಿತು. ನಗರದ ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳಿಂದ 400ಕ್ಕೂ ಹೆಚ್ಚು ಮಕ್ಕಳು ಭಾಗವಹಿಸಿ ಸರ್ವಧರ್ಮ ಪ್ರಾರ್ಥನೆ ಮಾಡಿದರು. ಈ ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಹೊನ್ನಾವರ ತಾಲ್ಲೂಕಿನ ಕಾರ್ಯನಿರ್ವಹಣಾಧಿಕಾರಿಗಳಾದ ಶ್ರೀಮಾನ್ ಸಿದ್ಧರಾಜು ಅವರು ಹಾಗೂ ಅತಿಥಿಗಳಾಗಿ ಮಾರ್ಥೋಮಾ ಶಾಲೆಯ ಪ್ರಾಂಶುಪಾಲರಾದ ಶ್ರೀ ಥೊಮೆಸ್ ಮೇಥ್ಯೂರವರು

ಪಾಲ್ಗೊಂಡು ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಎಸ್.ಎಂ. ಲೋಪಿಸ್ ಕಾರ್ಯಕ್ರಮ ಸಂಘಟಿಸಿದ್ದರು. ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆಯಿಂದ ಗೈಡ್ಸ್ ಆಯುಕ್ತೆ ಶ್ರೀಮತಿ ಲಲಿತಾ ಹೆಗಡೆ, ಸಹ ಆಯುಕ್ತೆ ಶ್ರೀಮತಿ ಶೋಭಾ ಕುಲಕರ್ಣಿ, ತರಬೇತಿ ಆಯುಕ್ತರಾದ ಶ್ರೀ ಬಿ.ಡಿ. ಫರ್ನಾಂಡಿಸ್ ಹಾಗೂ ಶ್ರೀ ರಾಜು ಹೆಬ್ಬಾರ, ಬೇಬಿ ವೈದ್ಯ, ಶ್ರೀ ವಿ.ವಿ. ನಾಯಕ್ ಮತ್ತು ನಗರದ ಶಾಲೆಗಳ ಸ್ಕೌಟ್ ಮಾಸ್ಟರ್‌ಗಳು ಹಾಗೂ ಗೈಡ್ಸ್ ಕ್ಯಾಪ್ಟನ್‌ಗಳು ಹಾಜರಿದ್ದರು. ತದನಂತರ ಮಾಧ್ಯಮಾ ಶಾಲೆಯ ಮಕ್ಕಳು ತಾಲ್ಲೂಕಿನ ಸರಕಾರಿ ಆಸ್ಪತ್ರೆ ಮತ್ತು ಶ್ರೀದೇವಿ ಆಸ್ಪತೆಗೆ ತೆರಳಿ ರೋಗಿಗಳಿಗೆ ಹಣ್ಣು ಹಂಪಲುಗಳನ್ನು ವಿತರಿಸಿದರು.

## ಚಾಮರಾಜನಗರ ಜಿಲ್ಲೆ

ದಿನಾಂಕ : 22-02-2008 ರಂದು ಶಿಕ್ಷಕರ ಭವನ ಚಾಮರಾಜನಗರದಲ್ಲಿ ಸಂಸ್ಥಾಪಕರ ದಿನಾಚರಣೆ ಹಾಗೂ ಸ್ಕೌಟ್ಸ್-ಗೈಡ್ಸ್, ಬುಲ್‌ಬುಲ್ ಮೇಳ ಏರ್ಪಡಿಸಲಾಯಿತು. ಬೆಳಿಗ್ಗೆ ಧ್ವಜಾರೋಹಣ ಮತ್ತು ಸರ್ವಧರ್ಮ ಪ್ರಾರ್ಥನೆ ನಡೆಯಿತು. ಶ್ರೀ ರವೀಂದ್ರನಾಥ ಕಮಾಂಡೆಂಟ್ ಹೋಂಗಾರ್ಡ್ ಅವರು ಪಥಚಲನೆಗೆ ಚಾಲನೆ ನೀಡಿದರು. ನಂತರ ಕಾರ್ಯಕ್ರಮವನ್ನು ಸಿ.ಇ.ಓ. ಶ್ರೀ ಜಯರಾಂರವರು ಉದ್ಘಾಟಿಸಿ. ಹಾಜರಾದ ಎಲ್ಲರಿಗೂ ಸ್ಕಾರ್ಫ್, ಓಗಲ್‌ನ್ನು, ಜಿಲ್ಲಾ ಪಂಚಾಯಿತಿಯಿಂದ ಒದಗಿಸಿಕೊಟ್ಟರು. ಈ ಸಭೆಗೆ ಮುಖ್ಯ ಅತಿಥಿಯಾಗಿ ಡಿ.ಡಿ.ಪಿ.ಐ., ಶ್ರೀ ಸಿ.ಎನ್. ನರಸಿಂಹಮೂರ್ತಿ, ಶ್ರೀಮಲ್ಲಿಕಾರ್ಜುನಸ್ವಾಮಿ, ಉಪಾಧ್ಯಕ್ಷರು, ಜಿಲ್ಲಾ ಸಂಸ್ಥೆ ಚಾಮರಾಜನಗರ, ಶ್ರಿ ಎಂ. ಚಂದ್ರಕಾಂತ, ಬಿ.ಇ.ಓ. ಚೇಗುರ್, ಡಿ.ಸಿ.(ಎಸ್), ಶ್ರೀನಿವಾಸಶೆಟ್ಟಿ, ಜಿಲ್ಲಾ ಖಜಾಂಜಿ, ಜಿಲ್ಲಾ ಕಾರ್ಯದರ್ಶಿ, ಡಿ.ಟಿ.ಸಿ., ಶ್ರೀ ವೆಂಟಕನಾಗಪ್ಪ ಶೆಟ್ಟಿ ಹೊಂಗಾರ್ಡ್ ಉಪಸ್ಥಿತರಿದ್ದು, ಅಧ್ಯಕ್ಷತೆಯನ್ನು ಡಿ.ಸಿ.ಸಿ. ಶ್ರೀ ಜಿ.ಆರ್. ಅಶ್ವತ್ಥ ನಾರಾಯಣರವರು ವಹಿಸಿದ್ದರು. ತದನಂತರ ಮಕ್ಕಳ ಸಾಂಸ್ಕೃತಿಕ ಕಾರ್ಯಕ್ರಮ ನಡೆಯಿತು. 400 ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳು ಮತ್ತು 30 ಸ್ಕೌಟರ್ಸ್ ಗೈಡರ್ಸ್‌ಗಳು ಭಾಗವಹಿಸಿದ್ದರು.

## ಶಿವಮೊಗ್ಗ ಜಿಲ್ಲೆ

ದಿನಾಂಕ 22-02-2008 ರಂದು ಜಿಲ್ಲಾ ಸ್ಕೌಟ್ ಭವನದ ಆವರಣದಲ್ಲಿ ಜಿಲ್ಲಾ ಸಂಸ್ಥೆಯ ಆಶ್ರಯದಲ್ಲಿ ಲಾರ್ಡ್ ಬೇಡನ್ ಪೊವೆಲ್‌ರವರ 151ನೇ ಜನ್ಮ ದಿನಾಚರಣೆ ಹಾಗೂ ಚಿಂತನಾ ದಿನಾಚರಣೆಯನ್ನು ಆಚರಿಸಲಾಯಿತು. ಶಿವಮೊಗ್ಗ ತಾಲ್ಲೂಕಿನ ಸ್ಕೌಟ್ಸ್-ಗೈಡ್ಸ್‌ಗಳಿಗೆ ಮೇಲ್ಕಂಡ ಜನ್ಮದಿನಾಚರಣೆಯ ಅಂಗವಾಗಿ ದೇಶಭಕ್ತಿ ಗಾಯನ ಸ್ಪರ್ಧೆ, ಚಿತ್ರ ಬಿಡಿಸುವ ಸ್ಪರ್ಧೆ, ಸ್ಕೌಟ್ಸ್-ಗೈಡ್ಸ್ ಬಗ್ಗೆ ರೂಪಕ ಮತ್ತು ಸಂಸ್ಥಾಪಕರ ಬಗ್ಗೆ ಭಾಷಣ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು.

ಸಂಜೆ ಸಂಸ್ಥಾಪಕರ ದಿನಾಚರಣೆಯ ಕಾರ್ಯಕ್ರಮದಲ್ಲಿ ಶ್ರೀ ಟಿ.ವಿ. ನಾರಾಯಣಶಾಸ್ತ್ರಿ, ಜಿಲ್ಲಾ ಮುಖ್ಯ ಆಯುಕ್ತರು ಅಧ್ಯಕ್ಷತೆ ವಹಿಸಿದ್ದರು. ಸಂಸ್ಥಾಪಕರ ಬಗ್ಗೆ ಶ್ರೀ ಟಿ.ಎ. ಮಂಜುನಾಥಾಚಾರ್, ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್) ಮತ್ತು ಶ್ರೀಮತಿ ಭಾರತಿ ಚಂದ್ರಶೇಖರ್, ಜಿಲ್ಲಾ ಆಯುಕ್ತರು (ಗೈಡ್ಸ್) ಮಾತನಾಡಿದರು. ಸ್ಪರ್ಧೆಯಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳಿಗೆ ಶ್ರೀ ಟಿ.ವಿ. ನಾರಾಯಣಶಾಸ್ತ್ರಿ, ಜಿಲ್ಲಾ ಮುಖ್ಯ ಆಯುಕ್ತರು, ಬಹುಮಾನವನ್ನು ವಿತರಿಸಿದರು.

ಸಮಾರಂಭದಲ್ಲಿ ಮೊದಲಿಗೆ ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ್ ಸರ್ವರನ್ನು ಸ್ವಾಗತಿಸಿದರು. ಕೊನೆಯಲ್ಲಿ ಸಹ ಜಿಲ್ಲಾಕಾರ್ಯದರ್ಶಿ, ಶ್ರೀ ಹೆಚ್.ಡಿ. ಉದಯಶಂಕರ್ ಶಾಸ್ತ್ರಿಯವರು ವಂದಿಸಿದರು.

## ಗದಗ ಜಿಲ್ಲೆ

ದಿನಾಂಕ : 23-02-2008 ರಂದು ಲಾರ್ಡ್ ಬೆಡನ್ ಪೊವೆಲ್ಲರ ಜನ್ಮ ದಿನಾಚರಣೆ ಮತ್ತು ಜಿಲ್ಲಾ ಪುರಸ್ಕಾರ 2008 ಕಾರ್ಯಕ್ರಮಗಳ ಉದ್ಘಾಟನೆಯನ್ನು ಮಾನ್ಯ ಗದಗ ಜಿಲ್ಲಾಧಿಕಾರಿಗಳಾದ ಶ್ರೀ ಎನ್. ಶ್ರೀರಾಮನ್ನವರು ದೀಪ ಬೆಳಗುವದರೊಂದಿಗೆ ನೆರವೇರಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಎನ್.ಎಚ್. ಕಟಕದೊಂಡ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಗದಗ, ಶ್ರೀ ಮುಕುಂದ ಪೋತ್ನೀಸ್, ಜಿಲ್ಲಾ ಸ್ಕೌಟ್ ಆಯುಕ್ತರು, ಶ್ರೀಮತಿ ಸುಮಾ ಗದಗ ಜಿಲ್ಲಾ ಗೈಡ್ಸ್ ಆಯುಕ್ತರು, ಶ್ರೀ ಶ್ರೀನಿವಾಸ ಹುಯಿಲಗೋಳ ಉಪಸ್ಥಿತರಿದ್ದರು. ಪಥ ಸಂಚಲನಕ್ಕೆ ಶ್ರೀಯುತ ಎನ್.ಎನ್. ಕಟಕದೊಂಡ, ಉಪನಿರ್ದೇಶಕರು ಹಾಗೂ ಶ್ರೀ ಮುಕುಂದ ಪೋತ್ನೀಸ್ ಹಸಿರು ನಿಶಾನೆ ತೋರಿಸಿದರು. ರಾತ್ರಿ ಶಿಬಿರಾಗ್ನಿ ಕಾರ್ಯಕ್ರಮವನ್ನು ಮುನಸಿಪಲ್ ಕಾಲೇಜಿನ ಮಾಜಿ ಸ್ಕೌಟ್ ಕಾರ್ಯದರ್ಶಿ ಶ್ರೀ ಎಸ್.ಎಸ್. ಘಾರ್ಫಿಯವರು ಉದ್ಘಾಟಿಸಿದರು.

ದಿನಾಂಕ 24-02-2008ರ ಬೆಳಿಗ್ಗೆ ಬಿ.ಪಿ. ವ್ಯಾಯಾಮ ಮಾಡಲಾಯಿತು. ನಂತರ ಸರ್ವಧರ್ಮ ಪ್ರಾರ್ಥನೆ ಮಾಡಿದರು. ಮಕ್ಕಳು ಸಾಮೂಹಿಕ ಸ್ವಚ್ಛತಾ ಕಾರ್ಯಮಾಡಿದರು. ತದನಂತರ ಶ್ರೀ ಸಂತೋಷ ಕೆ. ಪವಾರ್, ಸಬ್‌ಇನ್ಸ್‌ಪೆಕ್ಟರ್ ಇವರ ನೇತೃತ್ವದಲ್ಲಿ ರಸ್ತೆ ನಿಯಮ ಪಾಲನೆ ತರಬೇತಿ ನಡೆಯಿತು. ಜಿಲ್ಲಾ ಪುರಸ್ಕಾರ ಪ್ರಮಾಣ ಪತ್ರಗಳನ್ನು ಶ್ರೀಮತಿ ನಾಗರತ್ನ ಮುಳುಗುಂದ ವಿತರಿಸಿದರು.

## ಚಿಕ್ಕಮಗಳೂರು ಜಿಲ್ಲೆ

ದಿನಾಂಕ : 22-02-2008 ರಂದು ಸಂಸ್ಥಾಪಕರ ದಿನಾಚರಣೆ ಮತ್ತು ತಾಲ್ಲೂಕು ಮೇಳದ ಅಂಗವಾಗಿ ಏರ್ಪಡಿಸಿದ್ದ ಪಥಚಲನೆಯನ್ನು ಸಂಚಾರಿ ಪೊಲೀಸ್ ವೃತ್ತ ನಿರೀಕ್ಷಕರಾದ ಶ್ರೀ ಸಿದ್ಧಯ್ಯರವರು ತಾಲ್ಲೂಕು ಕಛೇರಿಯ ಆವರಣದಲ್ಲಿ ಉದ್ಘಾಟಿಸಿದರು.

ಸಮಾರೋಪ ಸಮಾರಂಭವು ಜಿಲ್ಲಾ ಸ್ಕೌಟ್ ಮತ್ತು ಗೈಡ್ ಭವನದ ಆವರಣದಲ್ಲಿ ನಗರ ಸಭಾ ಅಧ್ಯಕ್ಷರು ಹಾಗೂ ಸ್ಥಳೀಯ ಸಂಸ್ಥೆ ಗೌರವಾಧ್ಯಕ್ಷರು ಆದ ಶ್ರೀ ಕೋಟೆ ಕೃಷ್ಣ ಇವರ ಅಧ್ಯಕ್ಷತೆಯಲ್ಲಿ ನಡೆಯಿತು.

ಮಾಜಿ ಶಾಸಕರಾದ ಶ್ರೀ ಸಿ.ಟಿ. ರವಿಯವರು ತಾಲ್ಲೂಕಿನ ಹಿರಿಯ ಚೇತನಗಳಾದ ಶ್ರೀ ಎಂ.ಎನ್. ಷಡಕ್ಷರಿ ಮತ್ತು ಶ್ರೀಮತಿ ಸಿ. ಸಂಧ್ಯಾರಾಣಿ ಇವರಿಗೆ ಶಾಲುಹೊದಿಸಿ, ಸನ್ಮಾನಿಸಿದರು.

10 ವರ್ಷಕ್ಕೂ ಮೇಲ್ಪಟ್ಟು ಸೇವೆ ಸಲ್ಲಿಸಿದ ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳಿಗೆ ಜಿಲ್ಲಾ ಆಯುಕ್ತರಾದ ಶ್ರೀ ಎಂ.ಎನ್. ಷಡಕ್ಷರಿಯವರು ನೆನಪಿನ ಕಾಣಿಕೆ ನೀಡಿ ಗೌರವಿಸಿದರು.

ಸ್ಪರ್ಧೆಗಳಲ್ಲಿ ವಿಜೇತರಾದ ಸ್ಕೌಟ್ಸ್, ಗೈಡ್ಸ್, ಕಬ್ಸ್ ಮತ್ತು ಬುಲ್‌ಬುಲ್ಸ್‌ಗಳಿಗೆ ನಗರಸಭೆ ಮಾಜಿ ಉಪಾಧ್ಯಕ್ಷರಾದ ಶ್ರೀ ಶಂಕರರಾವ್‌ರವರು ಬಹುಮಾನ ವಿತರಿಸಿ, ಶುಭ ಕೋರಿದರು.

ಸಮಾರೋಪ ಭಾಷಣ ಮಾಡಿದ ಶ್ರೀ ಎಂ.ಎನ್. ಷಡಕ್ಷರಿಯವರು ಸ್ಕೌಟಿಂಗ್ ನಡೆದು ಬಂದ ದಾರಿ ಸ್ಕೌಟಿಂಗ್ ಧ್ಯೇಯ, ತತ್ವ ಮತ್ತು ಸಿದ್ಧಾಂತಗಳ ಪರಿಚಯ ನೀಡಿದರು.

ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ನೀಲಕಂಠಾಚಾರ್ಯರವರು ಪ್ರಾಸ್ತಾವಿಕ ಭಾಷಣ ಮಾಡಿದರು. ರಾಜ್ಯ ಪರಿಷತ್ ಸದಸ್ಯ ಶ್ರೀ ಸಿ.ಈ. ಮಂಜುನಾಥ್ ಸ್ವಾಗತಿಸಿ, ಜಿಲ್ಲಾ ತರಬೇತಿ ಆಯುಕ್ತೆ ಶ್ರೀಮತಿ ಸಂಧ್ಯರಾಣಿ ವಂದಿಸಿದರು. ಡಿ.ಓ.ಸಿ. ಶ್ರೀ ಎಂ.ಎಸ್. ಹೊನ್ನೇಗೌಡರು ಕಾರ್ಯಕ್ರಮದ ಮೇಲ್ವಿಚಾರಣೆ ವಹಿಸಿದ್ದರು.

# ಹಾಸನ ಜಿಲ್ಲೆ

**ಚನ್ನರಾಯಪಟ್ಟಣ ತಾಲ್ಲೂಕು ಮಟ್ಟದ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬಲ್‌ಬುಲ್ಸ್ ರ್‍ಯಾಲಿ ಹಾಗೂ ಸಂಸ್ಥಾಪಕರ ದಿನಾಚರಣೆ**

ದಿನಾಂಕ : 27-02-2008 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚನ್ನರಾಯಪಟ್ಟಣ ಸ್ಥಳೀಯ ಸಂಸ್ಥೆಯ ವತಿಯಿಂದ ತಾಲ್ಲೂಕು ಮಟ್ಟದ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್ ಮೇಳ ಹಾಗೂ ಸಂಸ್ಥಾಪಕರ ದಿನಾಚರಣೆಯನ್ನು ಗಣಪತಿ ಪೆಂಡಾಲ್ ಚನ್ನರಾಯುಪಟ್ಟಣ ಇಲ್ಲಿ ನಡೆಸಲಾಯಿತು. ಚನ್ನರಾಯಣಪಟ್ಟಣ ಸರ್ಕಾರಿ ಪ್ರೌಢಶಾಲೆಯ ಆವರಣದಲ್ಲಿ ಶ್ರೀ ಕುಮಾರ್, ಪೊಲೀಸ್ ಸರ್ಕಲ್ ಇನ್‌ಸ್ಪೆಕ್ಟರ್‌ರವರು ಪಥ ಸಂಚಲನಕ್ಕೆ ಚಾಲನೆ ನೀಡಿದರು.

ರ್‍ಯಾಲಿಯ ಉದ್ಘಾಟನಾ ಸಮಾರಂಭವು ಚನ್ನರಾಯುಪಟ್ಟಣ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಬೊಮ್ಮೇಗೌಡರ ಅಧ್ಯಕ್ಷತೆಯಲ್ಲಿ ನಡೆಸಲಾಯಿತು. ಶಿಬಿರದ ಉದ್ಘಾಟನೆಯನ್ನು ಶ್ರೀ ಚಂದ್ರಶೇಖರ್, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ ಚನ್ನರಾಯಪಟ್ಟಣ, ಇವರು ನೆರವೇರಿಸಿ ಮಕ್ಕಳಿಗೆ ಶುಭ ಹಾರೈಸಿದರು. ಶ್ರೀ ಎಲ್.ಟಿ. ಲೋಕೇಶ್, ಎ.ಎಸ್.ಓ.ಸಿ.ರವರು ಶಿಬಿರದ ಮುನ್ನೋಟವನ್ನು ತಿಳಿಸಿದರು.

ಮುಖ್ಯ ಅತಿಥಿಗಳಾಗಿ ಶ್ರೀ ಅಶೋಕ್, ಪರಿಸರವಾದಿ, ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಬ್ರಹ್ಮಪಾಲ್ ಜೈನ್‌ರವರು, ಶ್ರೀಯುತ ಅಣ್ಣೇಗೌಡರವರು, ತಾಲ್ಲೂಕ್ ದೈಹಿಕ ಶಿಕ್ಷಣ ಅಧೀಕ್ಷಕರು, ಶ್ರೀ ಚಂದ್ರಪ್ರಭು ಜೈನ್, ಉಪಾಧ್ಯಕ್ಷರಾದ ಶ್ರೀಮತಿ ಚ.ರಾ. ಗಂಗಮ್ಮ, ಶ್ರೀ ಪ್ರಕಾಶ್ ಜೈನ್, ಮುಂತಾದವರು ಆಗಮಿಸಿ ಶುಭ ಹಾರೈಸಿದರು. ಶ್ರೀ ವರಪ್ರಸಾದ ರೆಡ್ಡಿ, ತಾಲ್ಲೂಕು ತಹಶೀಲ್ದಾರ್‌ರವರು ವೀಕ್ಷಕರಾಗಿ ಆಗಮಿಸಿದ್ದರು. ಶ್ರೀ ಹೆಚ್.ಎಂ. ಗೌಡಯ್ಯ ಸಹಾಯಕ ಜಿಲ್ಲಾ ಆಯುಕ್ತರು ಸ್ವಾಗತಿಸಿ, ಭರತ್ ವಂದನೆ ಸಲ್ಲಿಸಿದರು. ಶ್ರೀ ತಮ್ಮಣ್ಣಗೌಡ, ಎ.ಡಿ.ಸಿ. ಕಾರ್ಯಕ್ರಮ ನಿರೂಪಿಸಿದರು.

ಸಂಜೆ ನಡೆದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಹೆಚ್.ಎಂ. ಗೌಡಯ್ಯ, ಎ.ಡಿ.ಸಿ. (ಸ್ಕೌಟ್) ಇವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ವೆಂಕಟೇಶಯ್ಯ, ತಾಲ್ಲೂಕು ಕಾರ್ಯನಿರ್ವಹಣಾಧಿಕಾರಿ -ಗಳು ಚನ್ನರಾಯಪಟ್ಟಣ ಇವರು ಆಗಮಿಸಿ ಸ್ಕೌಟ್ಸ್ - ಗೈಡ್ಸ್ ಮಕ್ಕಳ ಚಟುವಟಿಕೆಗಳನ್ನು ಕುರಿತು ಪ್ರಶಂಸಿಸಿದರು. 480 ಸ್ಕೌಟ್ಸ್-ಗೈಡ್ಸ್, ಕಬ್ಸ್ ಬುಲ್‌ಬುಲ್ಸ್ ಮಕ್ಕಳು ರ್‍ಯಾಲಿಯಲ್ಲಿ ಭಾಗವಹಿಸಿದ್ದರು.



ಹೊಳೆನರಸೀಪುರ ಗೈಡ್ಸ್ ಕಂಪನಿಯ 3ನೇ ವಾರ್ಷಿಕೋತ್ಸವ ಸಮಾರಂಭ ಹಾಗೂ ಲಾರ್ಡ್ ಬೇಡೆನ್ ಪೊವೆಲ್‌ರವರ ಜನ್ಮ ದಿನಾಚರಣೆ ಅಂಗವಾಗಿ ದಿನಾಂಕ 22-02-2008 ರಂದು ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಕಾರ್ಯಕ್ರಮದಲ್ಲಿ ಸ್ವಾಗತ ಭಾಷಣವನ್ನು ಗೈಡ್ಸ್ ಕ್ಯಾಪ್ಟನ್ ಕುಮುದರವರು ಕೋರಿದರು. ಶ್ರೀ ಎಲ್.ಟಿ. ಲೋಕೇಶ್‌ರವರು ಸ್ಕೌಟ್ ಮತ್ತು ಗೈಡ್ಸ್‌ನ ಪಿತಾಮಹರಾದ ಲಾರ್ಡ್ ಬೆಡೆಲ್ ಪೊವೆಲ್, ಬಗ್ಗೆ ವಿಸ್ತಾರವಾಗಿ ತಿಳಿಸಿದರು. ಶ್ರೀ ಎಂ.ಎಸ್. ಪ್ರಕಾಶ್‌ರವರು ಈ ಸಂಸ್ಥೆಯಿಂದ ಸಿಗುವ ವಿವಿಧ ಅನುಕೂಲಗಳು ಹಾಗೂ ಮೀಸಲಾತಿಯ ಬಗ್ಗೆ ತಿಳಿಸಿಕೊಟ್ಟರು. ಶ್ರೀ ಗೋವಿಂದರವರು ಮಕ್ಕಳಿಗೆ ಹಿತವಚನ ನೀಡಿದರು. ಶಾಲಾ ಮುಖ್ಯೋಪಾದ್ಯಾಯರು ಶುಭ ಹಾರೈಸಿ ಶಿಬಿರಕ್ಕೆ ಚಾಲನೆ ನೀಡಿದರು. ಬಳಿಕ ಎಲ್ಲರೂ ಗೈಡ್ಸ್‌ನ ವಸ್ತು ಪ್ರದರ್ಶನ ವೀಕ್ಷಿಸಿದರು. ಹಾಗೂ ಅಗ್ರಗಾಮಿ ಯೋಜನೆಗಳನ್ನು ಮಕ್ಕಳು ಪ್ರದರ್ಶಿಸಿದರು.

ಮಧ್ಯಾಹ್ನ ಊಟದ ನಂತರ ವಿವಿಧ ಸ್ಪರ್ಧೆಗಳು ನಡೆದವು. ಶಿಬಿರಾಗ್ನಿ ಕಾರ್ಯಕ್ರಮದೊಂದಿಗೆ ಮುಕ್ತಾಯವಾಯಿತು.

ಮರುದಿನ ಎಲ್ಲರೂ ಬೆಳಗ್ಗೆ 6.30ಕ್ಕೆ ಬಿ.ಪಿ. ವ್ಯಾಮಾಯಗಳನ್ನು ಮಾಡಿದ ಬಳಿಕ ಸರ್ವಧರ್ಮ ಪ್ರಾರ್ಥನೆಯಲ್ಲಿ ಪಾಲ್ಗೊಂಡರು. ಈ ಪ್ರಾರ್ಥನೆಯಲ್ಲಿ ಮೌಲ್ವಿ ಅಸ್ರಾರ್‌ರವರು ಬಂದು ಹಿತವಚನ ನೀಡಿದರು. ತರಗತಿಯಲ್ಲಿ ನಕ್ಷೆ ಬಗ್ಗೆ ವಿಸ್ತಾರವಾಗಿ ಕಲಿಸಿಕೊಡಲಾಯಿತು.

ಮುಕ್ತಾಯ ಸಮಾರಂಭದಲ್ಲಿ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಗೈಡ್ಸ್ ಕ್ಯಾಪ್ಟನ್ ಶ್ರೀಮತಿ ಆರ್. ಕುಮುದರವರು ವಹಿಸಿದ್ದರು. ಮುಖ್ಯ ಅತಿಥಿಯಾಗಿ ವಾಸವಿ ಶಾಲೆಯ ಮುಖ್ಯ ಶಿಕ್ಷಕರಾದ ಶ್ರೀ ಜಿ. ಸೀತಾರಾಮ್‌ರವರು ಆಗಮಿಸಿ ಮಕ್ಕಳಿಗೆ ಗೈಡ್ಸ್‌ನ ಕರ್ತವ್ಯವನ್ನು ಮನದಟ್ಟು ಮಾಡಿಕೊಟ್ಟರು. ನಂತರದಲ್ಲಿ ಶಿಬಿರಕ್ಕೆ ಭಾಗವಹಿಸಿದ ಮಕ್ಕಳಿಗೆ ಪ್ರಮಾಣ ಪತ್ರವನ್ನು ವಿಚರಿಸಿದರು.



ದಿನಾಂಕ : 22-02-2008 ರಂದು ಹಾಸನ ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆಯು ಹಮ್ಮಿಕೊಂಡ ಲಾರ್ಡ್ ಬೇಡನ್ ಪೊವೆಲ್ ಹಾಗೂ ಲೇಡಿ ಬೇಡನ್ ಪೊವೆಲ್‌ರವರ ಜನ್ಮ ದಿನಾಚರಣೆಯ ಸಮಾರಂಭದಲ್ಲಿ ಶ್ರೀಯುತ ವೀರಭದ್ರಪ್ಪ ಜಿಲ್ಲಾ ಆಯುಕ್ತರವರು ಅಧ್ಯಕ್ಷತೆ ವಹಿಸಿದ್ದರು. ಈ ಸಮಾರಂಭದ ಮುಖ್ಯ ಅತಿಥಿಗಳಾಗಿ ಜಿಲ್ಲಾ ಹಾಲು ಒಕ್ಕೂಟದ ಸಹಾಯಕ ವ್ಯವಸ್ಥಾಪಕ ಡಾ॥ ಎಂ.ಎಸ್. ಪಾಟೀಲ್ ಆಗಮಿಸಿದ್ದರು.

ಮತ್ತೋರ್ವ ಮುಖ್ಯ ಅತಿಥಿಗಳಾಗಿ ಅರವಿಂದ ಶಾಲೆಯ ಮುಖ್ಯೋಪಾಧ್ಯಾಯಿನಿ ಶ್ರೀಮತಿ ತುಳಸಿ ವಿಠಲ್‌ರವರು ಆಗಮಿಸಿದ್ದರು. ಸಮಾರಂಭದಲ್ಲಿ ಜಿಲ್ಲಾ ಹಾಲು ಒಕ್ಕೂಟದ ಮಾರುಕಟ್ಟೆ ಅಧಿಕಾರಿಗಳಾದ ಶ್ರೀ ಬಿ.ಕೆ. ಪ್ರಿಯರಂಜನ್ ದಾಸ್ ಹಾಗೂ ಮೋಹನ್ ಕುಮಾರ್ ಉಪಸ್ಥಿತರಿದ್ದು, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಚಂದ್ರಾಚಾರ್ ಸ್ವಾಗತಿಸಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ಎಸ್. ಪ್ರಕಾಶ್ ವರದಿ ನೀಡಿ, ಸ್ಥಳೀಯ ಸಂಸ್ಥೆಯ ಖಜಾಂಚಿ ಶ್ರೀ ಡಿ.ಎನ್. ಪ್ರಕಾಶ್ ವಂದಿಸಿದರು.

ಈ ದಿನಾಚರಣೆಯ ಅಂಗವಾಗಿ ಏರ್ಪಡಿಸಿದ್ದ ಸ್ಪರ್ಧೆಗಳಲ್ಲಿ ವಿಜೇತರಾದ ಸ್ಕೌಟ್ಸ್ - ಗೈಡ್ಸ್, ಕಬ್ಸ್-ಬುಲ್‌ಬುಲ್ಸ್ ಮಕ್ಕಳಿಗೆ ಬಹುಮಾನ ಹಾಗೂ ಪ್ರಶಸ್ತಿ ಪತ್ರಗಳನ್ನು ವಿತರಿಸಲಾಯಿತು. ಈ ಕಾರ್ಯಕ್ರಮದಲ್ಲಿ 500ಕ್ಕೂ ಹೆಚ್ಚು ಸ್ಕೌಟ್ಸ್ - ಗೈಡ್ಸ್ ಮಕ್ಕಳು ಭಾಗವಹಿಸಿದ್ದರು. ಕಾರ್ಯಕ್ರಮದ ನಿರೂಪಣೆಯನ್ನು ರಾಜ್ಯ ಸ್ಕೌಟರ್ ಪ್ರತಿನಿಧಿಯಾದ ಶ್ರೀ ಮುತ್ತೇಗೌಡರು ಮಾಡಿದರು. ಹಾಸನ ಹಾಲು ಒಕ್ಕೂಟದ ವತಿಯಿಂದ ಮಕ್ಕಳಿಗೆ ಸಿಹಿ ವಿತರಿಸಲಾಯಿತು.



ದಿನಾಂಕ : 19-02-2008 ರಂದು ಅರಸೀಕೆರೆ ತಾಲ್ಲೂಕು ಗಂಡಸಿ ಪದವಿ ಪೂರ್ವ ಕಾಲೇಜಿನಲ್ಲಿ ಸ್ನೇಹ ಗೈಡ್ ಕಂಪನಿಯ ವತಿಯಿಂದ ಚಿಂತನಾ ದಿನಾಚರಣೆಯನ್ನು ಆಚರಿಸಲಾಯಿತು. ಈ ಕಾರ್ಯಕ್ರಮದ ಅಂಗವಾಗಿ ಗೈಡ್ಸ್ ಮಕ್ಕಳಿಗೆ ಹಾಗೂ ಸ್ಕೌಟ್ಸ್‌ಗಳಿಗೆ ವಿವಿಧ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿತ್ತು. ಕಾರ್ಯಕ್ರಮದ ಸಮಾರೋಪ ಸಮಾರಂಭದಲ್ಲಿ ಶ್ರೀ ಎಂ.ವಿ. ಬಸವರಾಜುರವರು, ಗಂಡಸಿ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರು, ಅಧ್ಯಕ್ಷತೆ ವಹಿಸಿದ್ದರು. ಸಮಾರಂಭದಲ್ಲಿ ಕಾರ್ಯದರ್ಶಿ ಶ್ರೀ ನಾಗೇಶ್, ಸ್ಕೌಟರ್ಸ್-ಗೈಡರ್ಸ್‌ಗಳಾದ ಶ್ರೀ ಓಂಕಾರಮೂರ್ತಿ, ಶ್ರೀಮತಿ ಶಾಂತಕುಮಾರಿ, ಶ್ರೀಮತಿ ಲೋಕೇಶಮ್ಮ,

ಶ್ರೀ ಪುಟ್ಟಸ್ವಾಮಿ ಉಪಸ್ಥಿತರಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀಯುತ ಮಂಜಪ್ಪ ಶಿಕ್ಷಣ ಸಂಯೋಜಕರು ಅರಸೀಕೆರೆ ಇವರು ಆಗಮಿಸಿದ್ದರು.

## ಚಿತ್ರದುರ್ಗ ಜಿಲ್ಲೆ

ಸಂಸ್ಥಾಪಕರ ಜನ್ಮ ದಿನಾಚರಣೆಯನ್ನು ದಿನಾಂಕ : 22-02-2008 ರಂದು ಬೆಳಿಗ್ಗೆ ಚಿತ್ರದುರ್ಗ ನಗರದ ಗುರಭವನ ಮುಂಭಾಗದಲ್ಲಿ ಜಿಲ್ಲಾ ಸಹಾಯಕ ಆಯುಕ್ತರು ಹಾಗೂ ಜಿಲ್ಲಾ ಖಜಾಂಚಿಯವರು ಆದ ಶ್ರೀ ಟಿ.ಕೆ. ಶಿವಕುಮಾರ್‌ರವರಿಂದ ಪಥಚಲನೆ ಕಾರ್ಯಕ್ರಮಕ್ಕೆ ಹಸಿರು ಧ್ವಜ ತೋರಿಸುವುದರ ಮೂಲಕ ಉದ್ಘಾಟನೆ ಮಾಡಲಾಯಿತು. 500 ಸ್ಕೌಟ್ಸ್ ಗೈಡ್ಸ್ ಮಕ್ಕಳು ಭಾಗವಹಿಸಿದ್ದರು.

ಗುರುಭವನದಲ್ಲಿ ನಡೆದ ಕಾರ್ಯಕ್ರಮದಲ್ಲಿ ಶ್ರೀ ಸಿ.ಎಂ. ಶಿವಲಿಂಗಸ್ವಾಮಿ, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಸ್ವಾಗತಿಸಿದರು. ಅಧ್ಯಕ್ಷತೆಯನ್ನು ಶ್ರೀ ಎಂ. ರೇವಣಸಿದ್ಧಪ್ಪನವರು, ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಛೇರ್‌ಮೆನ್, ಸ್ಥಳೀಯ ಸಂಸ್ಥೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಚಿತ್ರದುರ್ಗ ಇವರು ವಹಿಸಿದ್ದರು.

ಮುಖ್ಯ ಅತಿಥಿಗಳಾಗಿ ಶ್ರೀಮತಿ ಜಯಶೀಲ ಮಹೇಶ್ವರಪ್ಪ, ಸಹಾಯಕ ಆಯುಕ್ತರು, ಜಿಲ್ಲಾ ಸಂಸ್ಥೆ ಚಿತ್ರದುರ್ಗ, ಶ್ರೀ ಟಿ.ಎಂ. ಶಿವಕುಮಾರಸ್ವಾಮಿ, ಸಹಾಯಕ ಆಯುಕ್ತರು, ಜಿಲ್ಲಾ ಸಂಸ್ಥೆ, ಚಿತ್ರದುರ್ಗ ಹಾಗೂ ಶ್ರೀಮತಿ ಷರ್ಫುನ್ನಿಸಾ, ಸಹಾಯಕ ಜಿಲ್ಲಾ ಆಯುಕ್ತರು, ಜಿಲ್ಲಾ ಸಂಸ್ಥೆ ಚಿತ್ರದುರ್ಗ ಇವರುಗಳು ಭಾಗವಹಿಸಿದ್ದರು.

## ರಾಯಚೂರು ಜಿಲ್ಲೆ

ಜಿಲ್ಲಾ ಸಂಸ್ಥೆ ವತಿಯಿಂದ ಸ್ಕೌಟ್ಸ್ ಸಂಸ್ಥಾಪಕ ಲಾರ್ಡ್ ಬೆಡೆನ್ ಪೊವೆಲ್‌ರವರ 151ನೇ ಜನ್ಮ ದಿನಾಚರಣೆಯನ್ನು "ವಿಶ್ವ ಸ್ಕೌಟ್ಸ್" ದಿನವನ್ನಾಗಿ ಆಚರಿಸಲಾಯಿತು. ಬಿ.ಪಿ.ಯವರ 151ನೇ ಹುಟ್ಟು ಹಬ್ಬದ ಕೇಕ್ ಕತ್ತರಿಸುವದರ ಮೂಲಕ ನಗರ ಸಭೆಯ ಅಧ್ಯಕ್ಷ ಶ್ರೀ ಮಾದಪ್ಪ ವಕೀಲರು ಕಾರ್ಯಕ್ರಮ ಉದ್ಘಾಟಿಸಿದರು.

ಜಿಲ್ಲಾ ಪಂಚಾಯತ್ ವಿರೋಧ ಪಕ್ಷದ ನಾಯಕ ಶ್ರೀ ಹರಿನಾರಾಯಣ ವಕೀಲರು ಬಿ.ಪಿ.ಯವರ ಭಾವಚಿತ್ರಕ್ಕೆ ಮಾಲಾರ್ಪಣೆ ಮಾಡಿದರು. ನಗರಸಭೆಯ ಉಪಾಧ್ಯಕ್ಷ ಶ್ರೀ ವಿ. ದೊಡ್ಡಮಲ್ಲೇಶ್ವರ ಉಪಸ್ಥಿತರಿದ್ದರು. ಅಧ್ಯಕ್ಷತೆಯನ್ನು ವಹಿಸಿದ್ದ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಸ್ಕೌಟ್ ಭವನ ಕೆಲವೆ ದಿನಗಳಲ್ಲಿ ಉದ್ಘಾಟನೆಗೊಳ್ಳಲಿದ್ದು ಸಹಾಯ ಮಾಡಿದ, ಶ್ರೀ ಎಸ್.ಎಸ್. ಬೋಸರಾಜ, ಮಾಜಿ ಶಾಸಕ, ಶ್ರೀ ಮುನಿಯಪ್ಪ ಮುದ್ದಪ್ಪ, ಶ್ರೀ ಡಿ.ಸಿ. ಕುಮಾರ ನಾಯಕರನ್ನು ಸ್ಮರಿಸಿದರು. ಡಾ|| ಆರ್. ನರಸಿಂಹ ಮೂರ್ತಿ ಸ್ವಾಗತಿಸಿ ಪ್ರಾಸ್ತಾವಿಕವಾಗಿ ಮಾತನಾಡಿದರು. ನೂತನ ಅಧ್ಯಕ್ಷ, ಉಪಾಧ್ಯಕ್ಷ, ವಿರೋದ ಪಕ್ಷ ನಾಯಕರಿಗೆ ಸನ್ಮಾನಿಸಲಾಯಿತು.

## ಗುಲಬರ್ಗಾ ಜಿಲ್ಲೆ

ದಿನಾಂಕ : 23-02-2008 ರಂದು ಸ್ಕೌಟ್ ಮತ್ತು ಗೈಡ್ ಸಂಸ್ಥಾಪಕ ದಿನಾಚರಣೆ ಹಾಗೂ ರ್‍ಯಾಲಿಯನ್ನು ಮತ್ತು ಬಿ.ಪಿ.ಯವರ 151ನೇ ಜನ್ಮದಿನಾಚರಣೆಯ ಕಾರ್ಯಕ್ರಮವನ್ನು ನಗರದ ಸರಕಾರಿ ಪ್ರೌಢಶಾಲೆ ಪೋಲಿಸ್ ಕಾಲೋನಿ, ಗುಲಬಾರ್ಗದಲ್ಲಿ ಆಯೋಜಿಸಲಾಗಿತ್ತು. ಈ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಶ್ರೀ ಎಸ್.ಪಿ. ಸುಳ್ಳದ್, ಜಿಲ್ಲಾ ಆಯುಕ್ತರು (ಸ್ಕೌ), ಶ್ರೀ ಶಾಂತಪ್ಪಾ ದೊಡ್ಡಮನಿ ಭಾಗವಹಿಸಿದ್ದರು. ವಲಯ ಸಹಾಯಕ ಶಿಕ್ಷಣಾಧಿಕಾರಿಗಳು ಅಧ್ಯಕ್ಷತೆ ವಹಿಸಿದ್ದರು. ಬಿ.ಪಿ.ಯವರ ಭಾವಚಿತ್ರಕ್ಕೆ ಮಾಲಾರ್ಪಣೆ ಹಾಗೂ ಜ್ಯೋತಿಯನ್ನು ಬೆಳಗಿಸುವ ಮೂಲಕ ಕಾರ್ಯಕ್ರಮ ಉದ್ಘಾಟಿಸಲಾಯಿತು.

ಸರ್ವಧರ್ಮ ಪ್ರಾರ್ಥನೆ, ಧ್ವಜಾರೋಹಣದ ನಂತರ ಸ್ಕೌಟ್ಸ್ ಗೈಡ್ಸ್ ಮಕ್ಕಳು ಸ್ಕಿಲೋರಾಮ ಚಟುವಟಿಕೆಗಳಲ್ಲಿ ಭಾಗವಹಿಸಿದ್ದರು. ಶ್ರೀ ವೀರಭದ್ರಯ್ಯ ಡಿ.ಓ.ಸಿ. ಸ್ವಾಗತ ಕೋರಿದರು. ಶ್ರೀ ಭೀಮಣ್ಣ ತಳವಾರ ಕಾರ್ಯಕ್ರಮ ನಿರೂಪಿಸಿದರು ಹಾಗೂ ವಂದನಾರ್ಪಣೆ ಮಾಡಿದರು. ನಂತರ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ ಮಕ್ಕಳು ಸಾಂಸ್ಕೃತಿಕ ಕಾರ್ಯಕ್ರಮ ನೀಡಿದರು.



ಸರದಾರ್ ವಲ್ಲಭ ಭಾಯಿ ಪಟೇಲ್, ಸುಭಾಶ್ ಮೆಮೋರಿಯಲ್ ಶಾಲೆ, ಆಯುರ್ವೇದ ಸ್ಕೌಟ್ ಮುಕ್ತ ದಳ ಮತ್ತು ಪುಷ್ಪಾಂಜಲಿ ಗೈಡ್ ಕಂಪನಿ ಇವರ ಸಂಯುಕ್ತ ಆಶ್ರಯದಲ್ಲಿ ದಿನಾಂಕ 23-02-2008 "ಬೆಡೆನ್ ಪೊವೆಲ್ ಇವರ ಜನ್ಮ ದಿನಾಚರಣೆಯನ್ನು ಕೆ.ಜಿ.ಪಿ. ಹೈಸ್ಕೂಲ್ ಶಾಲೆ ಗಣೇಶ ನಗರ ಆವರಣದಲ್ಲಿ ಅತಿ ವಿಜೃಂಭಣೆಯಿಂದ ಆಚರಿಸಲಾಯಿತು.

ಕಾರ್ಯಕ್ರಮವು ಸರ್ವಧರ್ಮ ಪ್ರಾರ್ಥನೆಯೊಂದಿಗೆ ಶ್ರೀಮತಿ ಶ್ರೀವಾಣಿ ಪ್ರಾಚಾರ್ಯರು, ಕೆ.ಜಿ.ಪಿ. ಹೈಸ್ಕೂಲ್ ಅವರ ಅಧ್ಯಕ್ಷತೆಯಲ್ಲಿ ಹಾಗೂ ಶ್ರೀಮತಿ ಪದ್ಮಪ್ರಿಯಾ (ಮಾಜಿ ಗೈಡ್ಸ್ ಜಿಲ್ಲಾ ಆಯುಕ್ತರು), ಶ್ರೀ ಗೋಪಾಲರಾವ್, ಶ್ರೀಮತಿ ರಫಿಯಾ ಬೇಗಮ್ ಮತ್ತು ಸ್ಕೌಟ್ಸ್ ಕಬ್ಸ್ 114, 74 ಗೈಡ್ಸ್ ಬುಲ್‌ಬುಲ್ಸ್ ಸಮ್ಮುಖದಲ್ಲಿ ಪ್ರಾರಂಭಿಸಲಾಯಿತು.

ನಂತರ ಧ್ವಜಾರೋಹಣ ಕಾರ್ಯಕ್ರಮದಲ್ಲಿ ಸ್ಕೌಟ್ ಮತ್ತು ಗೈಡ್ ಮಕ್ಕಳು ವಿವಿಧ ಚಟುವಟಿಕೆಗಳಾದ ರಂಗೋಲಿ ಸ್ಪರ್ಧೆ, ಚಿತ್ರ ಬಿಡಿಸುವ, ಕರಕುಶಲತೆ, ಮೆಹಂದಿ ಸ್ಪರ್ಧೆ ಚಟುವಟಿಕೆಗಳಲ್ಲಿ ಭಾಗವಹಿಸಿದರು. ಅಗ್ರಗಾಮಿ ಚಟುವಟಿಕೆಗಳಾದ ಗಂಟುಗಳು, ಲ್ಯಾಶಿಂಗ್‌ಗಳನ್ನು ಅತ್ಯಂತ ಸಮರ್ಪಕವಾಗಿ ಪ್ರದರ್ಶಿಸಿದರು. ಚಿತ್ರ ಪ್ರದರ್ಶನದಲ್ಲಿ ಸ್ಕೌಟಿಂಗ್, ಗೈಡಿಂಗ್, ಕಬ್ಸ್, ಬುಲ್‌ಬುಲ್ಸ್ ಮತ್ತು ರೋವರ್, ರೇಂಜರ್ ಬೆಳವಣಿಗೆಗಳನ್ನು ಮಕ್ಕಳು ವಿಕ್ಷೀಸಿದರು.

ಶತಮಾನೋತ್ಸವ ಕಾರ್ಯಕ್ರಮದ ಅಂಗವಾದ 100 ದೀಪ ಬೆಳಗಿಸುವ ಕಾರ್ಯಕ್ರಮವನ್ನು ಶ್ರೀ ಎಸ್.ಆರ್. ಸಂಪಿ, ಪ್ರಾಚಾರ್ಯರು ಸರಕಾರಿ ಪದವಿ ಪೂರ್ವ ಕಾಲೇಜ್ ಶ್ರೀ ಎಂ.ಬಿ. ನಗರ್, ಗುಲ್ಬರ್ಗಾ ಉದ್ಘಾಟಿಸಿದರು, ಎಲ್ಲ ಮಕ್ಕಳು 100 ದೀಪಗಳೊಂದಿಗೆ ಬಸವೇಶ್ವರ ಕಾಲೋನಿ ರಸ್ತೆಗಳಲ್ಲಿ ಪಥಸಂಚಲನೆ ಮಾಡುತ್ತ ಸಾಗಿದರು.

## ರಾಮನಗರ ಜಿಲ್ಲೆ

ರಾಮನಗರದಲ್ಲಿ ಬೇಡನ್ ಪೊವೆಲ್ ಹುಟ್ಟು ಹಬ್ಬವನ್ನು ದಿನಾಂಕ 28-02-2008ರ ಗುರುವಾರ, ಶಾಂತಿ ನಿಕೇತನ ವಿದ್ಯಾಮಂದಿರದ ಆವರಣದಲ್ಲಿ ಆಚರಿಸಲಾಯಿತು. ಬೆಳಗ್ಗೆ 10 ಗಂಟೆಗೆ ಸರಿಯಾಗಿ ವೃತ್ತ ಆರಕ್ಷಕ ನಿರೀಕ್ಷಕರಿಂದ ಉದ್ಘಾಟನೆಯಾಯಿತು. ಸುಮಾರು 250 ಮಕ್ಕಳು ಮತ್ತು 20 ಶಾಲಾ ಶಿಕ್ಷಕರು ಪಾಲ್ಗೊಂಡಿದ್ದರು. ಶಾಂತಿ ನಿಕೇತನ ವಿದ್ಯಾ ಸಂಸ್ಥೆಯವರು ಮಕ್ಕಳಿಗೆ ಭೋಜನದ ವ್ಯವಸ್ಥೆ ಮಾಡಿದ್ದರು. ಸಾಯಂಕಾಲ 3 ಗಂಟೆಗೆ ಮುಕ್ತಾಯ ಸಮಾರಂಭದಲ್ಲಿ ಉಪನಿರ್ದೇಶಕರು ಉಪಸ್ಥಿತರಿದ್ದರು.

## ಉಡುಪಿ ಜಿಲ್ಲೆ

### ಸ್ಕೌಟ್ಸ್-ಗೈಡ್ಸ್ ಸ್ಥಾಪಕರ ದಿನಾಚರಣೆ-ಕಬ್ಸ್ ಬುಲ್‌ಬುಲ್ಸ್ ಉತ್ಸವ

ಮಣಿಪಾಲ : ಸ್ಕೌಟ್ಸ್ ಗೈಡ್ಸ್ ಸ್ಥಾಪಕರ ದಿನಾಚರಣೆ ಮತ್ತು ಚಿಂತನಾ ದಿನಾಚರಣೆ ಹಾಗೂ ಕಬ್ಸ್ ಮತ್ತು ಬುಲ್‌ಬುಲ್ಸ್ ಉತ್ಸವವು, ಆರೋಗ್ಯವನ, ಮಣ್ಣಪಳ್ಳ, ಮಣಿಪಾಲ ಇಲ್ಲಿ ದಿನಾಂಕ 22-02-2008

ರಂದು ಉಡುಪಿ ಜಿಲ್ಲಾ ಸಂಸ್ಥೆಯ ವತಿಯಿಂದ ರೋಟರಿ ಉಡುಪಿ ಇವರ ಸಹಕಾರದಲ್ಲಿ ನಡೆಸಲಾಯಿತು.

ಶ್ರೀಮತಿ ಸಂಧ್ಯಾ ಎಸ್. ಪೈ, ವ್ಯವಸ್ಥಾಪಕ ಸಂಪಾದಕರು, ತರಂಗ ವಾರ ಪತ್ರಿಕೆ ಇವರು ಕಬ್ಸ್-ಬುಲ್‌ಬುಲ್ಸ್ ಪುಟಾಣಿಗಳಿಗೆ ವರ್ಣ ರಂಜಿತ ಬೆಲುನ್‌ಗಳನ್ನು ಹಸ್ತಾಂತರಿಸುವ ಮೂಲಕ ಕಬ್ಸ್ - ಬುಲ್‌ಬುಲ್ಸ್ ಉತ್ಸವವನ್ನು ಉದ್ಘಾಟಿಸಿದರು.

ಮುಖ್ಯ ಅತಿಥಿಗಳಾಗಿ ಡಾ|| ಎಚ್.ಜೆ. ಗೌರಿ, ಎಂ.ಡಿ. ಮಕ್ಕಳ ತಜ್ಞರು, ಸೋನಿಯಾ ಕ್ಲಿನಿಕ್ ಮಣಿಪಾಲ ಇವರು ಆಗಮಿಸಿದ್ದರು. ಶ್ರೀ ಪಾಂಗಾಳ ರವೀಂದ್ರ ನಾಯಕ್ ಸಭೆಯ ಅಧ್ಯಕ್ಷತೆ ವಹಿಸಿದ್ದರು. ರೋಟರಿ ಉಪಾಧ್ಯಕ್ಷರಾದ ಶ್ರೀ ಗಣೇಶ್ ರಾವ್ ಮಾತನಾಡಿದರು. ಪ್ರೊ. ದಯಾನಂದ ಶೆಟ್ಟಿ ಸಹಾಯಕ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಸಂಸ್ಥಾಪಕರ ದಿನಾಚರಣೆಯ ಬಗ್ಗೆ ಪ್ರಾಸ್ತಾವಿಕ ಭಾಷಣ ಮಾಡಿದರು. ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ಎಡ್ವಿನ್ ಆಳ್ವ, ಉಪಾಧ್ಯಕ್ಷರಾದ ಶ್ರೀಮತಿ ಜ್ಯೋತಿ ಜೆ. ಪೈ, ಸ್ಥಳೀಯ ಸಂಸ್ಥೆಯ ಕಾರ್ಯಾಧ್ಯಕ್ಷ ಶ್ರೀ ಕೆ. ಅನಂತರಾಮ ಉಪಾಧ್ಯಾಯ, ದೈಹಿಕ ಶಿಕ್ಷಣ ಸಂಯೋಜಕ, ಶ್ರೀ ಲಿಂಗರಾಜು, ರೋಟರಿ ಕಾರ್ಯದರ್ಶಿ, ಉಡುಪಿ ಶ್ರೀ ಐ.ಕೆ. ಜಯಚಂದ್ರ, ಶ್ರೀ ಕೆ.ಸಿ.ಎಂ. ಭಕ್ತ, ನ್ಯಾಯವಾದಿಗಳು, ಸಹಾಯಕ ಜಿಲ್ಲಾ ಆಯುಕ್ತರುಗಳಾದ ಶ್ರೀ ಯು. ದಾಮೋದರ್, ಶ್ರೀಮತಿ ಶಾಂತಿ ಡಿ. ಶಣೈ, ಜಿಲ್ಲಾ ಕಾರ್ಯದರ್ಶಿ, ಶ್ರೀ ಚಂದ್ರಶೇಖರ ಹೊಳ್ಳ ಇವರುಗಳು ವೇದಿಕೆಯಲ್ಲಿ ಉಪಸ್ಥಿತರಿದ್ದರು. ಶ್ರೀ ಕೆ.ಬಿ. ರಾವ್, ಜಿಲ್ಲಾ ಮುಖ್ಯ ಆಯುಕ್ತರು ಸ್ವಾಗತಿಸಿದರು. ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀಮತಿ ರಾಜಲಕ್ಷ್ಮಿ ಡಿ. ಶೆಟ್ಟಿ ಧನ್ಯವಾದ ನೀಡಿದರು. ಶ್ರೀ ಶೇಖರ ಪೂಜಾರಿ ಸ್ಥಳೀಯ ಕಾರ್ಯದರ್ಶಿ ಕಾರ್ಯಕ್ರಮ ನಿರ್ವಹಿಸಿದ್ದರು.

ಕಬ್ಸ್ ಬುಲ್‌ಬುಲ್ಸ್ ಉತ್ಸವದ ಸಮಾರೋಪ ಸಮಾರಂಭ ವಿಂಗ್ ಕಮಾಂಡರ್ ಬೋಜರಾವ್‌ರವರ ಅಧ್ಯಕ್ಷತೆಯಲ್ಲಿ ಜರುಗಿತು. ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಡಿ. ಮಂಜುನಾಥಯ್ಯರವರು ಸಮಾರೋಪ ಭಾಷಣ ಮಾಡಿದರು. ಹೆಡ್ ಕ್ವಾರ್ಟಸ್ ಕಮಿಷನರ್ (ಸ್ಕೌಟ್ಸ್) ಶ್ರೀ ಬಿ.ಜಿ. ವಾರಂಬಳ್ಳಿ ವೇದಿಕೆಯಲ್ಲಿ ಉಪಸ್ಥಿತರಿದ್ದರು. ಶ್ರೀ ಬಿ. ಆನಂದ ಅಡಿಗ ಸ್ವಾಗತಿಸಿದರು. ಶ್ರೀ ಎಂ. ಪ್ರಭಾಕರ ಭಟ್ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಧನ್ಯವಾದ ನೀಡಿದರು. ಪ್ರಸನ್ನ ಗಣಪತಿ ದೇವಸ್ಥಾನದ ಟ್ರಸ್ಟಿಗಳಾದ ಶ್ರೀ ನಾರಾಯಣ ಭಟ್, ಶ್ರೀ ಭಾಸ್ಕರ್ ರಾವ್ ಕಬ್ಸ್ ಬುಲ್‌ಬುಲ್ಸ್ ಉತ್ಸವದ ವ್ಯವಸ್ಥೆಯಲ್ಲಿ ಸಹಕರಿಸಿದರು. ಕಾರ್ಯಕ್ರಮದಲ್ಲಿ ಉಡುಪಿ ಸ್ಥಳೀಯ ಸಂಸ್ಥೆಯ ಶಾಲೆಗಳಿಂದ 550 ಕಬ್ಸ್ ಬುಲ್‌ಬುಲ್ಸ್ ವಿದ್ಯಾರ್ಥಿಗಳು, ಶಿಕ್ಷಕರು ಭಾಗವಹಿಸಿದ್ದರು.

## KOLAR SOUTH DISTRICT

*Bharat Scouts & Guides Kolar South District Celebrated the World Scout Day, Thinking Day on 21st and 22nd February 2008 at Scout Bhavan. Robertsonpet K.G.F. About 500 Cubs / Bulbuls / Scouts / Guides / Rovers and 100 Scouters and Guides participated in the programme.*

*Sri S. Paulraj, Headquarters Commissioner for Projects Inaugurated the celebrations on 21st February 2008. Sri Lokesh Reddy P.E.O., Office of the B.E.O., - K.G.F. Range Inaugurated the Activities.*

*On 22nd Febryary 2008 World Scout Day and Thinking day Celebration were held at 8 a.m. All faith Prayer was conducted. Later at 10 a.m. a Colourful Route March was organised in the main streets of the city. The Route march was flaged off by Sri Purushothaman, the Distrist Commandant, Homeguards K.G.F.*

*At 11 a.m. a Memorable Exhibition was setup. Records and books collected by Sri V.N.M. Felix Veteran and one of the founders of Scout Movement in K.G.F. were exhibited.*

*Dr. V.N. Prakash, District Commissioner (s) declared opne the Exhibition.*

*Later Scouts and Guides engaged in cooking activities of their own choice.*

*B.P. and Lady B.P. Birthday was celebrated in the atternoon. Sri. T.S. Lucus Asst. State Commissioner Planning and Development was the Chief Guest and he gave a wonderful talk on the life of B.P. and Lady B.P.*

*Mr. V.N.M. Felix day was also observed and Sri. M.S. Vincent, spoke about the Scout Life of Mr. Felix.*

## ಬೆಳಗಾವಿ ಜಿಲ್ಲೆ

ಬೆಳಗಾವಿ ಜಿಲ್ಲಾ ಸಂಸ್ಥೆ ದಿನಾಂಕ : 25.02.2008 ರಂದು ಬೆಳಗಾವಿ ನಗರದ ಸೇಂಟ್ ಜೋಸೆಪ್ ಪ್ರೌಢ ಶಾಲೆಯು ಸಭಾ ಭವನದಲ್ಲಿ ಸಂಸ್ಥಾಪಕರ ದಿನಾಚರಣೆಯನ್ನು ತುಂಬಾ ಸಡಗರದಿಂದ ಆಚರಿಸಿತು. ನಗರದ ಬೇರೆ ಬೇರೆ ಶಾಲೆಗಳಿಂದ 600 ಸ್ಕೌಟ್ಸ್ ಗೈಡ್ಸ್ ಕಬ್ಸ್ ಬುಲ್‌ಬುಲ್ಸ್ ಸ್ಕೌಟರ್ಸ್, ಗೈಡರ್ಸ್ ಹಾಗೂ ಪದಾಧಿಕಾರಿಗಳು ಭಾಗವಹಿಸಿದ್ದರು.

ಶ್ರೀ ಎಸ್. ಜಯಕುಮಾರಿ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾವಿ (ದ) ಇವರು ಸಂಸ್ಥಾಪಕರ ಭಾವಚಿತ್ರಕ್ಕೆ ಮಾಲಾರ್ಪಣೆ ಮಾಡಿ, ಜ್ಯೋತಿ ಬೆಳಗುವುದರ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು.

ಶ್ರೀ ಜಿ.ಎಂ. ಪಾಟೀಲ, ರಾಜ್ಯ ಸಹಾಯಕ ಸ್ಕೌಟ್ ಆಯುಕ್ತರು, ಬೆಳಗಾವಿ. ಶ್ರೀ ಬಿ.ಎಂ. ನಲವತ್ತವಾಡ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಬೆಳಗಾವಿ ನಗರ, ಶ್ರೀ ಕಟ್ಟಿಮನಿ, ದೈಹಿಕ ಶಿಕ್ಷಣ ಸಂಯೋಜಕರು, ಬೆಳಗಾವಿ ನಗರ, ರೆವರೆಂಡ್ ಸಿಸ್ಟರ್ ತೆರೆಸಾ ಮುಖ್ಯೋಪಾಧ್ಯಾಯನಿ ಸೆಂಟ್ ಜೋಸೆಪ್ ಪ್ರೌಢಶಾಲೆ, ರೆವರೆಂಡ್ ಸಿಸ್ಟರ್ ಜ್ಯೂಲಿ ರಿಸಾರಿಯೋ ಮುಖ್ಯೋಪಾಧ್ಯಾಯನಿ ಸೆಂಟ್ ಜೋಸೆಪ್ ಪ್ರೌಢ ಶಾಲೆ. ಮಿಸ್ ಜಾಸಮಿನ್ ಆರ್. ರುಬಡಿ, ಮುಖ್ಯೋಪಾಧ್ಯಾಯನಿ, ಸೆಂಟ್ ಮೇರಿ ಸ್ಕೂಲ್. ಲೆಫ್ಟಿನೆಂಟ್ ಕರ್ನಲ್ ಡಾ|| ವಿನೋದಿನಿ ಶರ್ಮಾ, ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು.

ಶ್ರೀ ಬಿ.ಆರ್. ನಾಯ್ಕರ್, ಜಿಲ್ಲಾ ಕಾರ್ಯದರ್ಶಿ, ಬೆಳಗಾವಿ, ಶ್ರೀ ಚವ್ಹಾಣ, ನಿವೃತ್ತ ಖಜಾನೆ ಅಧಿಕಾರಿ, ಬೆಳಗಾವಿ ಇವರು ಉಪಸ್ಥಿತರಿದ್ದರು.



ಚಿಕ್ಕೋಡಿ ಶೈಕ್ಷಣಿಕ ಜಿಲ್ಲೆ ಕಾಗವಾಡ, ಅಥಣಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಸ್ಥಳೀಯ ಸಂಸ್ಥೆಗಳ ಸಂಯುಕ್ತಾ ಶ್ರಯದಲ್ಲಿ ವಿಶ್ವ ಸ್ಕೌಟ್ ಶತಮಾನೋತ್ಸವ ದಿನಾಚರಣೆ ಅಂಗವಾಗಿ ಚಿಕ್ಕೋಡಿ ಶೈಕ್ಷಣಿಕ ಜಿಲ್ಲೆಯ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳ ಹಾಗೂ ಸಂಸ್ಥಾಪಕರ ದಿನಾಚರಣೆಯನ್ನು ದಿನಾಂಕ 22-02-2008ರಂದು ಶ್ರೀ ಹರಿವಿದ್ಯಾಲಯ ಉಗಾರ - ಖುರ್ದ ಇಲ್ಲಿ ವಿಜೃಂಭಣೆಯಿಂದ ಆಚರಿಸಲಾಯಿತು.

ಜಿಲ್ಲೆಯ 8 ವಲಯಗಳಿಂದ 2,200 ಸ್ಕೌಟ್ಸ್ - ಗೈಡ್ಸ್ ಮಕ್ಕಳು ಹಾಗೂ ಸ್ಕೌಟರ್ಸ್ - ಗೈಡರ್ಸ್ ಶಿಕ್ಷಕರು ಮತ್ತು ಪದಾಧಿಕಾರಿಗಳು ಭಾಗವಹಿಸಿದ್ದರು. ದಿನಾಂಕ 22-02-2008 ಪ್ರಾರ್ಥನೆ ಮತ್ತು ಧ್ವಜಾರೋಹಣ ಕಾರ್ಯಕ್ರಮದೊಂದಿಗೆ ಮೇಳ ಪ್ರಾರಂಭವಾಯಿತು. ಶ್ರೀ ಜಿ.ಎಂ. ಪಾಟೀಲ್, ರಾಜ್ಯ ಸಹಾಯಕ ಸ್ಕೌಟ್ ಆಯುಕ್ತರು ಬೆಳಗಾವಿ ವಿಭಾಗ, ಬೆಳಗಾವಿ ಇವರು ಸಂಸ್ಥಾಪಕರ ಭಾವ ಚಿತ್ರಕ್ಕೆ ಮಾಲಾರ್ಪಣೆ ಮಾಡಿ, ದೀಪ ಬೆಳಗುವುದರ ಮೂಲಕ ಮೇಳವನ್ನು ಸಂತೋಷದಿಂದ ಉದ್ಘಾಟಿಸಿದರು. ಶ್ರೀ ಸಿ.ವಿ. ಹಿರೇಮಠ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕೋಡಿ ಶೈಕ್ಷಣಿಕ ಜಿಲ್ಲೆ ಇವರು ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀಯುತರಾದ ಶ್ರೀ ವಿ.ಜಿ. ಪೋಳ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಕಾಗವಾಡ. ಶ್ರೀ ಜಿ.ಬಿ. ಮಣ್ಣಕೇರಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಅಥಣಿ. ಶ್ರೀ ಅಣ್ಣಾ ದೇಶಪಾಂಡೆ, ಕಾರ್ಯದರ್ಶಿ ಶ್ರೀ ಹರಿವಿದ್ಯಾಲಯ, ಶಿಕ್ಷಣ ಸಂಸ್ಥೆ. ಶ್ರೀ ಎ.ಕೆ. ಡೊಳ್ಳಿ ಅಧ್ಯಕ್ಷರು, ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಣ ಸಂಘ, ಕಾಗವಾಡ. ಶ್ರೀ ಜಿ.ಡಿ. ನಿಡೋಣಿ, ಅಧ್ಯಕ್ಷರು, ದೈಹಿಕ ಶಿಕ್ಷಣ ಸಂಘ, ಕಾಗವಾಡ. ಶ್ರೀ ಎಂ.ಎಸ್. ಉಪಡಿ, ಜಿಲ್ಲಾ ದೈಹಿಕ ಶಿಕ್ಷಣ ಸಂಯೋಜಕರು, ಕಾಗವಾಡ. ಶ್ರೀ ಎಸ್.ಬಿ. ಸೂರ್ಯವಂಶಿ, ಮುಖ್ಯೋಪಾಧ್ಯಾಯರು ಶ್ರೀ ಹರಿವಿದ್ಯಾಲಯ ಉಗಾರ ಇವರುಗಳು ಆಗಮಿಸಿದ್ದರು. ನಂತರ ಉಗಾರ ಖುರ್ದ ಪಟ್ಟಣದ ಪ್ರಮುಖ ಬೀದಿಗಳಲ್ಲಿ ಪಥಸಂಚಲನೆಯನ್ನು ನಡೆಸಲಾಯಿತು.

ಸಾಯಂಕಾಲ ಶಿಬಿರಾಗ್ನಿ ಕಾರ್ಯಕ್ರಮದ ಅಂಗವಾಗಿ ಮಕ್ಕಳು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೀಡಿದರು. ಮಾನ್ಯ ಶ್ರೀ ಸಿ.ವಿ. ಹಿರೇಮಠ, ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಚಿಕ್ಕೋಡಿ ಶೈಕ್ಷಣಿಕ ಜಿಲ್ಲೆ ಇವರು ಸ್ಮರಣಿಕೆಗಳನ್ನು ಮತ್ತು ಪ್ರಮಾಣ ಪತ್ರಗಳನ್ನು ಪ್ರಧಾನ ಮಾಡಿದರು. 21ನೇ ಜಾಗತಿಕ ಸ್ಕೌಟ್ ಜಾಂಬೂರಿ - ಇಂಗ್ಲೆಂಡಿಗೆ ಹೋಗಿ ಬಂದ ಚಿಕ್ಕೋಡಿ ವಲಯ ಮಹನಿಯರಿಗೆ ಶಾಲು ಹೊದಿಸಿ ಸನ್ಮಾನಿಸಿದರು.

## ಕೊಪ್ಪಳ ಜಿಲ್ಲೆ

ದಿನಾಂಕ : 23-02-2008 ರಂದು ಗಂಗಾವತಿ ಸ್ಥಳೀಯ ಸಂಸ್ಥೆ ಹಾಗೂ ಲಿಟಲ್ ಹಾರ್ಟ್ಸ್ ವಿದ್ಯಾ ಸಂಸ್ಥೆಯ ಆಶ್ರಯದಲ್ಲಿ ಬೇಡೆನ್ ಪೊವೆಲ್‌ರ ಜನ್ಮದಿನಾಚರಣೆಯನ್ನು ಸ್ಕೌಟ್ ಭವನದಲ್ಲಿ ಹಮ್ಮಿಕೊಳ್ಳಲಾಗಿತ್ತು. ವಿವಿಧ ಶಾಲೆಗಳಿಂದ ಸುಮಾರು 350 ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳು ಹಾಜರಾಗಿ ಸಂಚಲನದಲ್ಲಿ ಸಾರ್ವಜನಿಕ ಆಸ್ಪತ್ರೆಗೆ ತೆರಳಿ ಅಲ್ಲಿಯ ಒಳರೋಗಿಗಳಿಗೆ ಬ್ರೆಡ್ಡು ಹಣ್ಣು ವಿತರಿಸಿದರು. ನಂತರ ಮುಖ್ಯ ಬೀದಿಗಳಲ್ಲಿ ಸಂಚರಿಸಿ ಗಂಗಾವತಿ ಹೃದಯ

ಭಾಗದಲ್ಲಿ ಇರುವ ಗಾಂಧಿ ಪ್ರತಿಮೆಗೆ ಕೊಪ್ಪಳ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಹೆಚ್.ಎಂ. ಸಿದ್ದರಾಮಸ್ವಾಮಿಗಳು ಹಾಗೂ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಕರು ಹೂಮಾಲೆಯನ್ನು ಅರ್ಪಿಸಿದರು.

ನಂತರ ಲಿಟಲ್ ಹಾರ್ಟ್ಸ್ ಶಾಲೆಯಲ್ಲಿ ಮುಕ್ತಾಯ ಸಮಾರಂಭವನ್ನು ಆಯೋಜಿಸಲಾಗಿತ್ತು. ಈ ಸಮಯದಲ್ಲಿ ಶ್ರೀ ಎಚ್.ಎಂ. ಸಿದ್ದರಾಮಸ್ವಾಮಿ, ಜಿಲ್ಲಾ ಸ್ಕೌಟ್ ಆಯುಕ್ತರು ಮಾತನಾಡಿ ಶಿಸ್ತು ಮತ್ತು ಒಳ್ಳೆಯ ನಡತೆಯನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಲು ತಿಳಿಸಿದರು. ಈ ಸಮಾರಂಭದಲ್ಲಿ ಈ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಜಗನಾಥ್ ಆಲ್ಲಂಪಲ್ಲಿ, ಮುಖ್ಯೋಪಾಧ್ಯಾಮಿನಿಯಾದ ಶ್ರೀಮತಿ ಪ್ರಿಯಾ ಕುಮಾರಿ ಶ್ರೀ ಮಹ್ಮರ್ ಗುತ್ತಿ, ಶ್ರೀ ಎ. ಯರೆಣ್ಣ, ಡಿ.ಓ.ಸಿ. ಹಾಗೂ ಸ್ಥಳಿಯ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಸಂಗಯ್ಯ ಹಿರೇಮಠ ಉಪಸ್ಥಿತರಿದ್ದರು. ಶ್ರೀ ಎನ್. ಶಿವಪ್ರಸಾದ್ ಕಾರ್ಯಕ್ರಮವನ್ನು ನಿರೂಪಿಸಿದರೆ ಗೈಡ್ ಕ್ಯಾಪ್ಟನ್ ಶ್ರೀಮತಿ ಷಹಿನ್ ಕೌಷರ್ ವಂದನಾರ್ಪಣೆಯನ್ನು ಮಾಡಿದರು.

## BANGALORE NORTH DISTRICT

*Shivahinagar Local Assocuation Conducted the thinking day - founder's Day on 23rd Feb-2008 at St. Alphonsus High School, David's Road, Thomas Town. Nearly 150 Cubs, Bulbuls, Scouts and Guides were present.*

*"All faithis Prayer" was conducted sister theresa, Principal was the chief gust. Geames, Drawing and painting Competition were condicted for Cubs, Bulbules, Scouts and Guides special prizes were distubuted to the winners Sri T.S. Lucas, LT(S), Chairmen / spok, about life History of Lord Bedon Powel. Mrs Ratnanjali Nicodomus president. Miss Krupa Vijay, Treasurer and Mrs. Florence, Serretary were present. The programme was co-ordineted by Mrs Revathi. DTC(G).*

## ಧಾರವಾಡ ಜಿಲ್ಲೆ

ವಿಶ್ವ ಸ್ಕೌಟ್ ಚಳವಳಿಯ ಸಂಸ್ಥಾಪಕ ಲಾಡ್ ಬೆಡನ್ ಪಾವೆಲ್ ಮತ್ತು ಲೇಡಿ ಬೆಡನ್ ಪಾವೆಲ್‌ರ ಜನ್ಮ ದಿನೋತ್ಸವವನ್ನು ಇತ್ತೀಚೆಗೆ ಜಿಲ್ಲಾ ಸಂಸ್ಥೆಯ ಆವರಣದಲ್ಲಿ ಆಚರಿಸಲಾಯಿತು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ, ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರಾದ ಶ್ರೀ ರವೀಂದ್ರ ರಿತ್ತಿಯವರು ಮಾತನಾಡುತ್ತಾ ಸ್ಕೌಟ್ ಗೈಡ್ ಧ್ಯೇಯ, ಗುರಿಗಳು ಇಂದಿನ ಶೈಕ್ಷಣಿಕ ಸಂಘಟನೆಗೆ ಅತ್ಯಂತ ಪೂರಕವಾಗಿದೆ ಎಂದರು. ಅಧ್ಯಕ್ಷೀಯ ಸ್ಥಾನದಲ್ಲಿ ಶ್ರೀ ಎಸ್.ಎಸ್. ಗಿಡ್ಡೆ -ಯವರು ಮಾತನಾಡುತ್ತಾ ಇತ್ತೀಚೆಗೆ ಲಂಡನ್‌ನಲ್ಲಿ ನಡೆಗ ಬೃಹತ್ ಸ್ಕೌಟ್ ಗೈಡ್ ಮೇಳದಲ್ಲಿ ಭಾಗವಹಿಸುವ ಒಂದು ಅವಕಾಶವನ್ನು ಪಡೆದೆ ಎಂದು ಹೇಳಿದರು. 300ಕ್ಕೂ ಹೆಚ್ಚು ಮಕ್ಕಳು ಭಾಗವಹಿಸಿದ ಈ ಕಾರ್ಯಕ್ರಮದಲ್ಲಿ ಪ್ರಾರ್ಥನೆಯ ನಂತರ ಶ್ರೀ ಬಿ.ಕೆ. ಪಾಟೀಲ ಸ್ವಾಗತಿಸಿದರು. ಶ್ರೀ ಎಂ.ವಿ. ಶಿಂಧೆ ವಂದಿಸಿದರು. ಶ್ರೀ ಬಲ್ಮೆ ಕಾರ್ಯಕ್ರಮ ಸಂಯೋಜನೆ

ಮಾಡಿದರು. ಶ್ರೀಮತಿ ಸುಮಂಗಲಾ ಹಿರೇಮಠ, ಶ್ರೀ ಎಂ.ಎಂ. ಲೋಂಡೆ, ಆಶಾ ಬೆಣ್ಣಿ, ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್ನರು ಉಪಸ್ಥಿತರಿದ್ದರು.

## ಕೋಲಾರ ದಕ್ಷಿಣ ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಮುಳಬಾಗಿಲು ಸ್ಥಳೀಯ ಸಂಸ್ಥೆ ವತಿಯಿಂದ, ದಿನಾಂಕ 25.02.2008 ರಂದು ಡಿ.ವಿ.ಜಿ. ರಂಗಮಂದಿರದಲ್ಲಿ ನಡೆಸಲಾದ ವಿಶ್ವ ಸ್ಕೌಟ್ ಶತಮಾನೋತ್ಸವ ಸಂಸ್ಥಾಪಕರ ದಿನಾಚಾರಣೆ, ಹಾಗೂ ತಾಲ್ಲೂಕು ರ್‍ಯಾಲಿಯ ಉದ್ಘಾಟನೆಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯ ವ್ಯವಸ್ಥಾಪಕರಾದ ಶ್ರೀಯುತ ನಂಜಪ್ಪನವರು ನೇರವರೇಸಿದರು. ರಾಜ್ಯ ಸರ್ಕಾರಿ ನೌಕರರ ಸಂಘದ ಕೋಶಾಧಿಕಾರಿಯಾದ ಶ್ರೀ ರಾಜ್‌ಕುಮಾರ್‌ರವರು ಮಕ್ಕಳನ್ನು ಕುರಿತು ಮಾತನಾಡಿದರು. ನಂತರ ಜೂನಿಯರ್. ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಎಸ್.ಎಂ. ವೆಂಕಟ-ರಾಮಯ್ಯನವರು ಸ್ಕೌಟ್ಸ್, ಗೈಡ್ಸ್‌ಗಳು ಇತರೆ ವಿದ್ಯಾರ್ಥಿಗಳಿಗೆ ಮಾದರಿಯಾಗಿ ದೇಶ ಪ್ರೇಮ ಮೂಡಿಸುವ ಕಾರ್ಯಕ್ರಮಗಳನ್ನು ಮಾಡುವಂತೆ ಕರೆ ನೀಡಿದರು. ನಂತರ ಪ್ರಮುಖ ಬೀದಿಗಳಲ್ಲಿ ಸ್ಕೌಟ್ಸ್ ಗೈಡ್ಸ್ ಶಿಕ್ಷಕ ಶಿಕ್ಷಕಿಯರು ಪಥಸಂಚಲನ ನಡೆಸಿದರು.

ಸಮಾರಂಭದಲ್ಲಿ ಬಿ.ಇ.ಓ. ಕಛೇರಿಯ ನಾರಾಯಣಶೆಟ್ಟಿ ಶಿಬಿರದ ನಾಯಕರಾದ ಶ್ರೀ ಡಿ. ಪ್ರಭಾಕರ್, ಡಿ.ಓ.ಸಿ. ಶ್ರೀ ನಾರಾಯಣಸ್ವಾಮಿ, ಎ.ಎಸ್.ಓ.ಸಿ., ಶ್ರೀಮತಿ ಶಾಮಲ, ಜನಾರ್ದನರಾವ್ ಮುಂತಾದವರು ಮಾತನಾಡಿದರು. ಶ್ರೀ ಚಾಂದಬಾಷ್, ಸಹಾಯಕ ಜಿಲ್ಲಾ ಆಯುಕ್ತರು ಎಲ್ಲರನ್ನು ಸ್ವಾಗತಿಸಿದರು. ಶ್ರೀ ಶ್ರೀನಿವಾಸಗೌಡ ಎಲ್ಲರಿಗೂ ವಂದಿಸಿದರು. ಕಾರ್ಯಕ್ರಮ ನಿರೂಪಣೆಯನ್ನು ಸ್ಕೌಟ್ ಶಿಕ್ಷಕರಾದ ಶ್ರೀ ಬಿ.ಬಿ. ಶಂಕರ್ ಮಾಡಿದರು.

ನಂತರ ಮಕ್ಕಳಿಗೆ ಗುಡಾರ ನಿರ್ಮಾಣ, ಅಡುಗೆ ಮಾಡುವುದು, ಧ್ವಜ ನಿರ್ಮಾಣ ರಸಪ್ರಶ್ನೆ, ಇನ್ನಿತರ ಹಲವು ಕಾರ್ಯಕ್ರಮಗಳನ್ನು ನಡೆಸಲಾಯಿತು. ಸುಮಾರು 450 ಸ್ಕೌಟ್ ಮತ್ತು ಗೈಡ್ಸ್ ವಿದ್ಯಾರ್ಥಿಗಳು ರ್‍ಯಾಲಿಯಲ್ಲಿ ಭಾಗವಹಿಸಿದ್ದರು.

ಸಂಜೆ ನಡೆದ ಮುಕ್ತಾಯ ಸಮಾರಂಭದಲ್ಲಿ ಶಿಕ್ಷಣ ಸಂಯೋಜಕರಾದ ಶ್ರೀ ವಿ. ರಂಗಸ್ವಾಮಿಯವರು ವಿದ್ಯಾರ್ಥಿಗಳು ದೇಶದ ಹಿರಿಯರ ಬದುಕನ್ನು ಮಾದರಿಯಾಗಿ ತೆಗೆದುಕೊಂಡು ತಮ್ಮ ಜೀವನವನ್ನು ರೂಪಿಸಿಕೊಳ್ಳಬೇಕು ಎಂದು ಕರೆ ನೀಡಿದರು. ಅಧ್ಯಕ್ಷತೆ ವಹಿಸಿದ್ದ ರಾಜ್ಯ ಸಂಸ್ಥೆಯ ಪ್ರತಿನಿಧಿ ಶ್ರೀ ಎಂ.ವಿ. ಜನಾರ್ಧನರವರು ರಾಷ್ಟ್ರ ಹಾಗೂ ರಾಜ್ಯದಲ್ಲಿ ಸ್ಕೌಟ್ ಸಂಸ್ಥೆ ಉತ್ತಮವಾಗಿ ಕೆಲಸ ಮಾಡುತ್ತಿದೆ ಎಂದರು. ಸಂಸ್ಥೆಯ ಕಾರ್ಯದರ್ಶಿ, ಶ್ರೀ ಇ. ಶ್ರೀನಿವಾಸಗೌಡ ಶಿಬಿರದ ನಾಯಕರಾದ ಶ್ರೀ ಡಿ. ಪ್ರಭಾಕರ್, ಶ್ರೀ ಬಿ.ಎನ್. ಬಾಲಕೃಷ್ಣ ರೆಡ್ಡಿ, ಶ್ರೀಮತಿ ಅಂಜಲಿದೇವಿ ಮಾತನಾಡಿದರು. ಗೈಡ್ ಕು॥ ಅರ್ಚನಾ ಪ್ರಾರ್ಥಿನೆ ಸ್ಕೌಟರ್ ಶ್ರೀಮತಿ ಎಸ್. ಸುರೇಶ್ ಸ್ವಾಗತಿಸಿದರು. ಶ್ರೀಮತಿ ಶ್ಯಾಮಲ, ಎ.ಎಸ್.ಓ.ಸಿ. ನಿರೂಪಿಸಿದರು. ಕೊನೆಯಲ್ಲಿ ಶ್ರೀ ಡಿ. ಪ್ರಭಾಕರ್ ವಂದಿಸಿದರು. ರಾಷ್ಟ್ರಗೀತೆಯೊಂದಿಗೆ ಕಾರ್ಯಕ್ರಮವನ್ನು ಮುಕ್ತಾಯಗೊಳಿಸಲಾಯಿತು.

## ತುಮಕೂರು ಜಿಲ್ಲೆ

ಶಿರಾ ತಾಲ್ಲೂಕು ಸ್ಕೌಟ್ಸ್ ಗೈಡ್ಸ್ ರ್‍ಯಾಲಿ ದಿನಾಂಕ 10-03-2008ರಂದು ಸರ್ಕಾರಿ ಪದವಿ ಪೂರ್ವ ಕಾಲೇಜು ಇಲ್ಲಿ ಏರ್ಪಡಿಸಲ್ಲಾಗಿತ್ತು. ಇದೇ ಸಂದರ್ಭದಲ್ಲಿ ಸ್ಕೌಟ್ಸ್ ಡೆನ್‌ರೂಂನ ಉದ್ಘಾಟನಾ ಕಾರ್ಯಕ್ರಮ ಏರ್ಪಡಿಸ-ಲಾಗಿತ್ತು. ಸಭೆಯಲ್ಲಿ ಎಸ್.ಡಿ.ಎಂ.ಸಿ. ಅಧ್ಯಕ್ಷರು, ಸದಸ್ಯರು, ಸ್ಕೌಟ್ಸ್ ಮತ್ತು ಸ್ಕೌಟರ್ಸ್ ಹಾಜರಿಸಿದ್ದರು.

ಶ್ರೀ ರೇಣುಕಾಪ್ರಸಾದ್, ತಹಶೀಲ್ದಾರ್, ಶಿರಾ ಇವರು ಕೊಠಡಿಯನ್ನು ಉದ್ಘಾಟಿಸಿ ಕಾರ್ಯಚಾಲನೆ ನೀಡಿದರು. ಶ್ರೀ ಅಶೋಕ ಕುಮಾರ್ ಪ್ರಾಚಾರ್ಯರು ಹಾಗೂ ಉಪಾಧ್ಯಕ್ಷರು ಹಾಗೂ ನಗರ ಸಭಾ ಅಧ್ಯಕ್ಷರಾದ ಶ್ರೀಮತಿ ಅನ್ನಪೂರ್ಣರಂಗನಾಥ ಉಪಸ್ಥಿತರಿದ್ದರು. ಸ್ಕೌಟ್ಸ್ ಗೈಡ್ಸ್ ನಡೆದು ಬಂದ ದಾರಿ ಮತ್ತು ಪ್ರಾಸ್ತವಿಕ ನುಡಿಯನ್ನು ಶ್ರೀ ಪಾತಲಿಂಗಯ್ಯ, ಎ.ಡಿ.ಸಿ. (ಎಸ್) ಬಿ.ಎಸ್.ಜಿ. ಶಿರಾ ಇವರು ನಡೆಸಿ ಕೊಟ್ಟರು. ಶ್ರೀಮತಿ ಹಂಸವೇಣಿ ಶ್ರೀನಿವಾಸ್ ತಾಲ್ಲೂಕ್ ಪಂಚಾಯಿತಿ ಅಧ್ಯಕ್ಷರು ರ್‍ಯಾಲಿಯನ್ನು ಜ್ಯೋತಿ ಬೆಳಗಿಸುವುದರೊಂದಿಗೆ ಉದ್ಘಾಟಿಸಿದರು. ಅಧ್ಯಕ್ಷ ಸ್ಥಾನದಿಂದ ತಹಶೀಲ್ದಾರ್ ಶ್ರೀ ರೇಣುಕಾ ಪ್ರಸಾದ್‌ರವರು ಸ್ಕೌಟ್ಸ್ ಗೈಡ್ಸ್ ಇನ್ನೂ ಜನರ ಮನಸ್ಸಿನಲ್ಲಿ ಸರಿಯಾಗಿ ಬರಬೇಕು ಎಂದರು. ಶ್ರೀ ಹೆಚ್. ಹನುಮಂತರಾಯ, ಕಾರ್ಯದರ್ಶಿ ಎಲ್ಲರನ್ನು ಸ್ವಾಗತಿಸಿದರು.

ಸಮಾರೋಪ ಸಮಾರಂಭದಲ್ಲಿ ಶ್ರೀ ಕೃಷ್ಣಮೂರ್ತಿ ಬಿ.ಇ.ಓ.ರವರು ಒಂದು ಸ್ಕೌಟ್ - ಗೈಡ್ ತರಬೇತಿ ನಡೆಸಲು ಸಹಕರಿಸುವೆನು ಎಂದು ಆಶ್ವಾಸನೆ ನೀಡಿ, ಚಳವಳಿಗೆ ಯಶಸ್ಸು ಕೋರಿದರು.

ಮಕ್ಕಳಿಗೆ ಸಾಹಸ, ಚಟುವಟಿಕೆಗಳು, ಗೀತೆಗಳು ಕ್ವಿಜ್ ಕಾರ್ಯಕ್ರಮ ನಡೆಸಿಕೊಡಲಾಯಿತು. ಶ್ರೀ ಹೆಚ್. ಕುಮಾರ್ ಸ್ಕೌಟ್ ಮಾಸ್ಟರ್ ಮಿತ್ರರು ಜಾಥಾ ನಡೆಸಿಕೊಟ್ಟರು. ಖಜಾಂಚಿ ಶ್ರೀ ರಾಮಚಂದ್ರಪ್ಪನವರು ವಂದಿಸಿದರು.

## ಏಪ್ರಿಲ್ ಹಾಗೂ ಮೇ 2008ರಲ್ಲಿ ರಾಜ್ಯ ಸಂಸ್ಥೆ ಆಯೋಜಿಸಿರುವ ತರಬೇತಿ ಕಾರ್ಯಕ್ರಮಗಳು

### ಶಿವಮೊಗ್ಗ ಜಿಲ್ಲೆ ಹೆಗ್ಗೋಡಿನಲ್ಲಿ ರಾಜ್ಯ ತರಬೇತಿ ನಾಯಕರುಗಳ ಸಮಾವೇಶ

ಮೇಲ್ಕಂಡ ಸಮಾವೇಶವು ದಿನಾಂಕ ~~26-04~~ 14/05-2008 ರಿಂದ ~~29-04~~ 17/05-2008ರ ವರೆಗೆ ಹೊಂಗಿರಣ ರೆಸಿಡೆನ್ಸಿಯಲ್ ಸ್ಕೂಲ್, ಹೆಗ್ಗೋಡು, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಇಲ್ಲಿ ಏರ್ಪಡಿಸಲಾಗಿದೆ. ರಾಜ್ಯದ ಎಲ್ಲಾ ತರಬೇತಿ ನಾಯಕರುಗಳು ಭಾಗವಹಿಸಲು ಕೋರಿದೆ.

### ರಾಜ್ಯ ಮಟ್ಟದ ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪೂರ್ವ ಸಿದ್ಧತಾ ಶಿಬಿರಗಳು

1. ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರ, ಕೊಂಡಜ್ಜಿಯಲ್ಲಿ ದಿನಾಂಕ 26-04-2008 ರಿಂದ 30-04-2008ರ ವರೆಗೆ
2. ಡಾ|| ಅನಿಬೆಸೆಂಟ್ ಪಾರ್ಕ್, ದೊಡ್ಡಬಳ್ಳಾಪುರದಲ್ಲಿ ದಿನಾಂಕ 03-05-2008 ರಿಂದ 07-05-2008ರ ವರೆಗೆ

ಸುತ್ತೋಲೆಯಲ್ಲಿ ಈಗಾಗಲೇ ಸೂಚಿಸಿರುವ ಜಿಲ್ಲಾ ಸಂಸ್ಥೆಗಳು 2007-08ನೇ ಸಾಲಿನಲ್ಲಿ ಉತ್ತೀರ್ಣರಾಗಿರುವ ರಾಜ್ಯ ಪುರಸ್ಕಾರ ಸ್ಕೌಟ್ಸ್ ಮತ್ತು ಗೈಡ್ಸ್‌ಗಳನ್ನು ಶಿಬಿರಕ್ಕೆ ಸಕಾಲಕ್ಕೆ ನಿಯೋಜಿಸಲು ಕೋರಲಾಗಿದೆ.

– ರಾಜ್ಯ ಕಾರ್ಯದರ್ಶಿ




Smt. B.Kamalamma, Under Secretary to Government Department of Youth Services & Sports delivered Valedictory address of the World Scout Day & Thinking Day. Smt Geetha Nataraj, JSS presented Bouquet to her on the Occasion Smt. B.M. Vanajakshi of the Department is also seen.

9-03-08ರಂದು ಜರುಗಿದ ರಾಜ್ಯಮಟ್ಟದ ಆಜೀವ ಸದಸ್ಯರ ಸಮಾವೇಶದಲ್ಲಿ ಏಷಿಯಾ ಫೆಸಿಫಿಕ್ ಸ್ಕೌಟ್ ಸಮಿತಿಯ ಹಿರಿಯ ಉಪಾಧ್ಯಕ್ಷರಾಗಿ ಆಯ್ಕೆಯಾಗಿರುವ ಶ್ರೀ ಎಂ.ಎ. ಖಾಲಿದ್ ಅವರನ್ನು ರಾಜ್ಯ ಸಂಸ್ಥೆ ಪರವಾಗಿ ಹೃತ್ಪೂರ್ವಕವಾಗಿ ಅಭಿನಂದಿಸಲಾಯಿತು. ಶ್ರೀ ಗೊ.ರು.ಚನ್ನಬಸಪ್ಪ, ಶ್ರೀ ಎ.ಶಿವಮಹದೇವನ್, ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್, ಶ್ರೀ ಕೊಂಡಜ್ಜಿ ಬ.ಷಣ್ಮುಖಪ್ಪ ಶ್ರೀ ಟಿ.ಪ್ರಭಾಕರ್, ಶ್ರೀಮತಿ ಎಂ.ಜಿ.ಬೋಪಯ್ಯ, ಶ್ರೀ ಸುರೇಶ್ ಹೆಬ್ಳೀಕರ್, ಶ್ರೀ ಮಹಮದ್ ಜಾಹಿರುದ್ದೀನ್, ಶ್ರೀ ಪ್ರಭುದೇವ್ ಜೆ. ಚಿಗಟೇರಿ, ಶ್ರೀ ಕೆ.ತಿಮ್ಮಪ್ಪ, ಶ್ರೀ ಎಂ. ಶ್ರೀನಿವಾಸ್ ಚಿತ್ರದಲ್ಲಿದ್ದಾರೆ.






9-03-08ರಂದು ಬಸವಭವನದಲ್ಲಿ ಜರುಗಿದ ಆಜೀವ ಸದಸ್ಯರ ಸಮಾವೇಶದಲ್ಲಿ ಭಾಗವಹಿಸಿದ ಸಮಿತಿ ಸಂಚಾಲಕರಾದ ಶ್ರೀ ಪ್ರಭುದೇವ ಜೆ. ಚಿಗಟೇರಿ, ಸಮಿತಿ ಅಧ್ಯಕ್ಷರಾದ ಶ್ರೀ ಎ. ಶಿವಮಹದೇವನ್, ವಿಶೇಷ ಅತಿಥಿಯಾಗಿ ಭಾಗವಹಿಸಿದ ಶ್ರೀ ಎಂ. ಎ. ಖಾಲಿದ್, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಸಮಾವೇಶ ಉದ್ಘಾಟಕರಾದ, ಶ್ರೀ ಗೊ. ರು. ಚನ್ನಬಸಪ್ಪ ಶ್ರೀ ಮಹಮದ್ ಜಾಹಿರುದ್ದೀನ್ ಹಾಗೂ ಶ್ರೀಮತಿ ಎಂ.ಜಿ. ಬೋಪಯ್ಯ ಅವರುಗಳನ್ನು ಕಾಣಬಹುದು.





-03-08ರಂದು ಬೆಂಗಳೂರಿನ ಬಸವ ಭವನದಲ್ಲಿ ಜರುಗಿದ ರಾಜ್ಯಮಟ್ಟದ ಆಜೀವ ಸದಸ್ಯರುಗಳ ಸಮಾವೇಶದಲ್ಲಿ ಭಾಗವಹಿಸಿದ ಸದಸ್ಯರ ವಿಹಂಗಮ ನೋಟ.





ಸಾಹಸ ಚಟುವಟಿಕೆಯಲ್ಲಿ ತೊಡಗಿರುವ ಹಾಸನ ಜಿಲ್ಲೆಯ ಗೈಡ್ಸ್‌ಗಳು


ಗಂಟುಗಳನ್ನು ಅಭ್ಯಾಸಿಸುತ್ತಿರುವ ಉತ್ತರ ಕನ್ನಡ ಜಿಲ್ಲೆಯ ಸ್ಕೌಟ್ಸ್- ಗೈಡ್ಸ್‌ಗಳು


ಗದಗನ ಗಾಂಧೀ ವೃತ್ತದಲ್ಲಿ ರಸ್ತೆ ನಿಯಮ ಪಾಲನೆಯಲ್ಲಿ ಪಾಲ್ಗೊಂಡ ಸ್ಕೌಟ್ಸ್ – ಗೈಡ್ಸ್ ಹಾಗೂ ಸ್ಕೌಟರ್ – ಗೈಡರ್‌ಗಳು.

Regd as News Paper (Magazine) No : **CPMG/KA/BGW-549/2006-08**
Permitted to Post under WPP System
Vide No.: WPP-87 of SSP, BANGALORE WEST
Posted at: Bangalore City H.P.O. on 31-3-2008



ಸ್ಕೌಟ್ ಶತಮಾನೋತ್ಸವ – 2007

Price Rs. 3.00/- per copy only




# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide

*News Magazine*

**If not delivered please return to :**

EDITOR, Karnataka Scout & Guide
State Headquarters, Prof. P. Sivashankar Circle
Kondajji Basappa Road, Fort
Bangalore - 560 002.  Ph:26701227

Published for : The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018